# ಬಹಿಷ್ಕಾರ

## ಒಂದು ಚಿತ್ರ

ಕೈಲಾಸಂ

**ಸೂಚನೆ :**—ಭೂತದಯವುಳ್ಳವರು ಜಗದೊಳು ।
ಭೂತನಾಥನ ಪ್ರೇಮಪಾತ್ರರು ।
ಭೂತದಯವನು ತೊರೆದ ಪಾಪಿಗಳೆಂಥ ಬ್ರಾಹ್ಮಣರೋ ? ॥

ಸಾ. ರಾ.

ಪ್ರಕಾಶಕರು

ರಾಮಮೋಹನ ಕಂಪೆನಿ

**ಬಳೇಪೇಟೆ — — ಬೆಂಗಳೂರು ನಗರ**

## ಪಾತ್ರಗಳು.

| | |
|---|---|
| ರಂಗಣ್ಣ . . . . | ಕಚೇರಿ ಮುನ್ಷಿ. |
| ಲಕ್ಷ್ಮೀಪತಿ . . . . | ಈತನ ಸ್ನೇಹಿತ; ಡಾಕ್ಟರು. |
| ವೆಂಕಟಲಕ್ಷ್ಮಮ್ಮ . . . | ರಂಗಣ್ಣನ ಹೆಂಡತಿ. |
| ನರಸು . . . . | ಹಿರಿಯ ಮಗಳು. |
| ಕಿಟ್ಟೂ . . . . | ಮಗ. |
| ಪುಟ್ಟಿ . . . . | ಕಿರಿಯ ಮಗಳು. |

**ಅವಸಾನ ಪ್ರಾಪ್ತಳಾದ ರಂಗಣ್ಣನ ತಾಯಿ.**

ಇಬ್ಬರು ಬ್ರಾಹ್ಮಣರು.

**ಸ್ಥಾನ**—ರಾಮಪುರ.          **ಕಾಲ**—ಆಧುನಿಕ.

# ಬಹಿಷ್ಕಾರ

## ಪ್ರಥಮ ರಂಗ.

**ಸ್ಥಾನ:**—ರಂಗಣ್ಣನ ಮನೆಯ ಮುಂದಿನ ಕೋಣೆ.

[ಈತನ ಮುದಿ ತಾಯಿಯು ಅಂತ್ಯಕಾಲಾವಸ್ಥೆಯಲ್ಲಿ ಮಂಚದ ಮೇಲೆ ಮಲಗಿರುವಳು. ರಂಗಣ್ಣನು ಪಕ್ಕದಲ್ಲಿರುವನು. . . . ವೆಂಕಮ್ಮನು ನರಸುವನ್ನೂ ಕಿಟ್ಟಿಯು ಕೂಸನ್ನೂ ಸಂತೈಸುತ್ತಿರುವರು. ಲಕ್ಷ್ಮೀಪತಿಯು ಕೋಣೆಯ ಮಧ್ಯದಲ್ಲಿ ಸ್ತಂಭಿತನಾಗಿ ನಿಂತಿರುವನು.]

**ತಾಯಿ :**—(ರಂಗಣ್ಣನನ್ನು ಎಡಗೈಯಿಂದ ತಬ್ಬಿಕೊಂಡು) ಹಯ್ಯೋ! ಮಗೂ....ನನ್ನ ಹದ್ನಾರನೇ ವಯಸ್ಸಿನಲ್ಲಿ ವರ್ಷಕೂಡಾ ತುಂಬದ ನಿನ್ನ . . . ನನ್ಕೈಲಿಟ್ಬಿಟ್ಟು . . . . (ಮಗನನ್ನು ಬಾಚಿ ತಬ್ಬಿ ಕೊಳ್ಳುತ್ತಾ) ನಮ್ಮಿಬ್ಬರನ್ನೂ ಬಿಟ್ಬಿಟ್ಹೋದ ನಿಮ್ತಂದೇಗೆ . . . ಈ ಎರಡು ವರ್ಷಗಳ ಶ್ರಾದ್ಧ ತಪ್ಹೋದ್ಮೇಲೆ . . . ಸತ್ಮೇಲೆ ನನಗ್ಸ ದ್ಗತಿ ತಾನೇ ಎಲ್ಲೀದೂ ? . . . . ಹಯ್ಯೋ! . . . ಕಾದಿದ್ದೂ . . . ಕಾದಿದ್ದೂ . . . ಕೊನೇಗೆ . . . ಮೋಸ್ಹೋದ್ನೆಲ್ಲಾ . . . (ಕೈಯ ನ್ನು ನರಸುವಿನ ಕಡೆಗೆ ತೋರಿಸಿ) ಯಾಕ್ಹುಟ್ಟಿದ್ಲೀ ಶನೀ? . . . (ತಗ್ಗಿದ ಧ್ವನಿಯಿಂದ) ಗಂಗೋದ್ಕ . . . ಗಂಗೋದ್ಕ . . . ಮಗೂ . . . ಹೋಗ್ತಿದ್ದೇನೆ . . . . ಕಿವೀಲಿ . . . . ನಾರಾಯಣಾ, ನಾರಾ ಯಣಾನ್ನು.

**ವೆಂಕಟಲಕ್ಷಮ್ಮ** :— (ಥಟ್ಟನೆ ಕಾಶೀತಾಮ್ರದ ಗಂಗಾ ಕುಂಭವನ್ನು ಡಾಕ್ಟ್ರಿಗೆ ಕೈಯಿಂದ ತೋರಿಸಿ) ಡಾಕ್ಟ್ರೇ, ಅಕೋ ಅಲ್ಲಿ . . . ಪಂಚಪಾತ್ರೆ ಉದ್ಧರಣೆ ಪಕ್ಕದಲ್ಲೇ ಇದೆ.

[ಲಕ್ಷ್ಮೀಪತಿಯು ಗಂಗೋದಕವನ್ನು ತಾಮ್ರದ ಚೊಂಬಿನಿಂದ ಪಂಚಪಾತ್ರೆಗೆ ಬಗ್ಗಿಸಿ, ರಂಗಣ್ಣನು ಉದ್ಧರಣೆ, ಉದ್ಧರಣೆಯಾಗಿ . . . . "ಅಮ್ಮಾ ! ಅಮ್ಮಾ !! " ಎಂದು ಹಂಬಲಿಸುತ್ತಾ, "ನಾರಾಯಣ, ನಾರಾಯಣಾ" ಎಂದು ಜಪಿಸುತ್ತಾ, ತಾಯಿಯ ಬಾಯಿಗೆ ಗಂಗೆಯನ್ನು ಹಾಕುವನು.]

**ನರಸು** :— (ತಾಯಿಯ ಭುಜಗಳನ್ನು ಹಿಡಿದು ಕುಲುಕಿ ಅಲುಗಿಸುತ್ತಾ) ಅಮ್ಮಾ ! . . . . ನನ್ಯಾಕ್ಬೈತಾಳಜ್ಜಿ . . . . . ಸಾಯೋವಾಗ ?

**ವೆಂಕಮ್ಮ** :—(ನರಸುವನ್ನು ತಬ್ಬಿಕೊಂಡು, ತಗ್ಗಿದ ಧ್ವನಿಯಿಂದ) ಷ್ ! ಸುಮ್ನಿರ್ಕಂದ . . . ಈಗ್ಸುಮ್ನಿರು.

**ತಾಯಿ** :—ನಾ . . . ರಾ . . . ಯ . . . (ಪ್ರಾಣಗಳನ್ನು ಬಿಡುವಳು.)

**ರಂಗಣ್ಣ** :—(ತಾಯಿಯ ದೇಹದ ಮೇಲೆ ಮುಖವನ್ನು ಹೊರಳಿಸುತ್ತಾ) ಹಯ್ಯೋವಮ್ಮಾ! . . . ಸಾಯೋವಾಗ್ಕೂಡಾ . . . ಸದ್ಗತಿ ಮೇಲ್ಸಂದೇಹಪಟ್ಕೊಂಡ್ಸತ್ಯಾ ? !! . . . ಸಾರ್ಥಕ್ವಿದೇನೇ . . . ನಾನ್ಹುಟ್ಟಿದ್ದಕ್ಕಿನ್ಹುಟ್ಟೇಲಿ . . . . (ನರಸುವನ್ನು ಸೂಚಿಸಿ) ಯಾಕ್ಹುಟ್ಟಿದ್ನೀ ಶನೀ . . .

**ನರಸು** :—(ತಾಯಿಯ ಭುಜಗಳನ್ನು ಹಿಡಿದು ಕುಲುಕಿ ಅಲುಗಿಸುತ್ತಾ) ಅಮ್ಮಾ . . . ಅಪ್ನೂವೇ !! . . . ಬಯ್ತಾನೆ . . . . . ಏನಮ್ಮಾ . . . . . . ನಾನ್ಮಾಡಿದ್ತಪ್ಪು ?

**ವೆಂಕಮ್ಮ** :— ( ನರಸುವಿನ ಹಣೆಯನ್ನಾಘ್ರಾಣಿಸುತ್ತಾ, ಕಣ್ಣೀರು ಸುರಿಸುತ್ತಾ ಗದ್ಗದ ಧ್ವನಿಯಿಂದ) ದಮ್ಮಯ್ಯ . . ನನ್ಕಂದ . . . ಸದ್ಯ ಈಗ್ಸುಮ್ನಿರು . . .

**ಲಕ್ಷ್ಮೀಪತಿ**:—(ಮಂಚವನ್ನು ಸಮೀಪಿಸಿ ಮೃತಳಾದಾಕೆಯ ಕಣ್ಣುಗಳನ್ನು ಮುಚ್ಚುತ್ತಾ) ರಂಗಣ್ಣಾ . . . You *must* be brave . . . . . ಏಕೆ ರೋಗ್ರಸ್ತಿಯೇನು ? (ರಂಗಣ್ಣನನ್ನು ಮಂಚದಿಂದೀಚೆಗೆ ಸೆಳೆಯುತ್ತಾ) . . . . ಇನ್ನಾಕೆ troubles ಏನು . . . ಮುಗೀತು.

**ರಂಗಣ್ಣ**:—(ರಂಗಸ್ಥಳದ ಮುಂಭಾಗವನ್ನು ಸೇರಿ ಲಕ್ಷ್ಮೀಪತಿಯನ್ನು ತಬ್ಬಿಕೊಂಡು, ಹಣೆಯನ್ನು ಬಡಿದುಕೊಳ್ಳುತ್ತಾ) . . . Troubles ಮುಗೀತೂ !! . . . ಹಯ್ಯೋ ! ಲಕ್ಷ್ಮೀಪತೀ . . . troubles ಎಲ್ಲಿಗೀತೂ ? . . . ನಾಳೇ . . . ಶವಾನಸಾಗ್ಸೋಕೆ . . . . ಜನಗ್ಳು . . . ಸಿಕ್ಬೇಕಲ್ಲಾ!!! (ಜ್ಞಾನತಪ್ಪಿ ಲಕ್ಷ್ಮೀಪತಿಯ ಹೆಗಲಮೇಲೆ ಒರಗುವನು.)

(ಥರದೆಯು ಥಟ್ಟನೆ ಬೀಳುವುದು.)

---

## ದ್ವಿತೀಯ ರಂಗ.

**ಸ್ಥಾನ**:—ರಾಮಪುರದ ಒಂದು ಬೀದಿ.

(ಕಾಲ:—ಎರಡು ವರ್ಷಗಳ ಅನಂತರ. ರಂಗಣ್ಣನ ತಾಯಿಯ ಶ್ರಾದ್ಧದ ದಿನ.)

[ರಂಗಣ್ಣನು ತಲೆಯ ಮೇಲೆ ಗಂಟುಗಳನ್ನು ಇಟ್ಟುಕೊಂಡಿರುವ ಇಬ್ಬರು ಬ್ರಾಹ್ಮಣರೊಂದಿಗೆ ಪ್ರವೇಶಿಸುವನು.]

**ರಂಗಣ್ಣ**:—ನಮ್ಮನೇ ಹೆಚ್ಚಗ್ಟ್ಲೀಗೆ ಇಪತ್ತು ಬ್ರಾಹ್ಮಣ್ರು ಸಿಕ್ಕೋದಸಾಧ್ಯ ಅಂತ ನಿಶ್ಚಯಿಸ್ಕೊಂಡು, ನಾನಿನ್ನೊತದ್ದೂ . . . ದಾರೀ ತಪ್ಪಿ, ನಮ್ಮೂರ್ಕಡೆ ತಿರ್ಗಿ, ಹಸ್ದು ನೀವ್ಗಳು ಸನ್ಸೇರಿದ್ದೂ, ಇವೆರ್ಡೂ ಏಕ್ಕಾಲದಲ್ಲಿ ಹೊಂದಿದ್ದು .... ನೀವ್ಹೇಳೋ ಹಾಗೆ, ದೈವ ನಿಯಾಮಕ್ಕ .... ಆದ್ರೆ ನಮ್ಮನೇ ಶ್ರಾದ್ಧಾನ ಜರಗ್ಸೋಕೆ ನನಗಿರೋ

ಆತುರದಲ್ಲಿ, ತಡೀಲಾರ್ದ ಹಸ್ವಿನ್ನ ತೀರ್ಸ್ಕೊಳ್ಳೋಕಾತುರ್ಪಡ್ತಿರೋ ನಿಮ್ಮನ್ನ ನಮ್ಮನೇ ನಿಮಂತ್ರಣಕ್ಕೊಪ್ಪಿಸ್ಬಿಟ್ಟು ..... ಆದ್ರಿಂದ ಮುಂದೆ ನಿಮಗೊದಗ್ಬಹುದಾದ ಅಪಾಯಕ್ಕೆ ನಿಮ್ಮನ್ನಗುರಿಮಾಡೋದು ನನಗೆ ಧರ್ಮವಲ್ಲ, ಬ್ರಾಹ್ಮಣ್ಯವಲ್ಲ. ಆದ್ರಿಂದ ನನ್ನ ಪೂರ್ವೋತ್ತರಾನ್ಕೇಳಿ ಮನಸ್ಸಿಗೆ ಮಂದಟ್ಮಾಡ್ಕೊಂಡು, ಈ ಕೆಲಸದಿಂದ ನಿಮ್ಗಳಿಗ್ಬಹುದಾದ ಜವಾಬ್ದಾರೀನ ವಹಿಸ್ಕೋಬೇಕೇ ಹೊರ್ತು ನೀವು ಕೇವ್ಲ ಕ್ಷುತ್ಪಿಪಾಸೇನ ತೀರಿಸ್ಕೊಳ್ಳೋ ಆತುರದಲ್ಲಿ.... ದುಡ್ಕಬಾರ್ದು....ನನ್ಹೆಸ್ರು ರಂಗಣ್ಣ, ಗೋತ್ರ ವಾಸಿಷ್ಠ.

**೧ ನೇ ಬ್ರಾಹ್ಮಣ:**—ಮತ್ತಿನ್ನೇನ್ಬೇಕು, ಸ್ವಾಮಿ? ವಾಸಿಷ್ಠ ಗೋತ್ರದ ಬ್ರಾಹ್ಮಣನ್ನನೇ ನಿಮಂತ್ರಣಕ್ಕೊಪ್ಕೊಂಡಾಕ್ಷಣ್ವೇ ಅಪಾಯಾ ಅಂದ್ರೇನ್ನಮಗೆ?....ಅದೇನ್ಜವಾಬ್ದಾರಿ ಹತ್ತೀತು ನನ್ಹೊಗಲ್ಲ....ನಾವೆಲ್ಲ....ಬ್ರಾಹ್ಮಣ್ರು ತಾನೇ?

**೨ ನೇ ಬ್ರಾಹ್ಮಣ:**—ಹೌದು ಭಟ್ರೆ....ಹೌದು ಸ್ವಾಮಿ. ಅದೇ ನನ್ಗೂ ಆಶ್ಚರ್ಯ....ನಿಮ್ಮನೇ ಬ್ರಾಹ್ಮಣ್ಯಕ್ಕೊಪ್ಕೊಂಡು ನಿಮ್ಮವತ್ತಿನ್ಕೃತ್ಯಾನ ನಡ್ಸಿದ್ರಿಂದ ನಿಮ್ಪುರಾರ್ಥದಲ್ಲಿ ನಾವೂ ಭಾಗಿಗಳೇ ಹೊರ್ತು....ಅಪಾಯ ಎಂಥಾದ್ದು ನಮಗೆ?

**ರಂಗಣ್ಣ:**—ಕೇಳೀ....ಇವತ್ತಿನ್ಕೆಲ್ಸಾನ ನೀವುಗಳ್ಳ ನಡ್ಸಿಕೊಟ್ರಿ, ನಿಮಗೊಂದ್ವೇಳೆ ಒದಗೋ ಅಪಾಯಾನ....ಒಂದೇ ಮಾತ್ಲಿ ಹೇಳ್ಬಿಡ್ತೇನೆ....ಬಹಿಷ್ಕಾರ! ನನಗ್ಯಾವ ಸನ್ನಿಧಾನದಿಂದ ಬಹಿಷ್ಕಾರ ಬಿದ್ದಿದೆಯೋ ಅದೇ ಸನ್ನಿಧಾನದಿಂದ ನಿಮ್ಗೂ ಬೀಳ್ಬಹ್ದು, ಬಹಿಷ್ಕಾರ!

**೧ ನೇ ಬ್ರಾಹ್ಮಣ:**—(ಬೆಚ್ಚಿಬಿದ್ದು) ಬಹಿಷ್ಕಾರ! ನಿಮಗೆ! ಸನ್ನಿಧಾನದಿಂದ!.....ಕ್ಷಮಿಸ್ಸಿ. ಎಷ್ಟೋ ಕೃತ್ರಿಮಾನ ಮಾಡ್ದೋರ್ನ ಕರುಣ ದೃಷ್ಟಿಯಿಂದ ನೋಡಿ.... ಅಲ್ಪಸ್ವಲ್ಪ ಪ್ರಾಯಶ್ಚಿತ್ತದಿಂದ್ಲೆ ಪುನಃ ಶುದ್ಧ ಮಾಡಿ ಬಾಹ್ಮಣ್ಕೇನುಳಸ್ಕೊಟ್ಟು ಬದಕ್ಸಿರೋ ಶಾಂತಿಮೂರ್ತಿಯಾದ ಸನ್ನಿಧಾನ.... ನಿಮ್ಮಂಥವರಿಗೇಂದ್ರೇನು?

ಬಹಿಷ್ಕಾರಾಂದ್ರೇನು ?....ನಿವ್ಮಾಡಿದ್ದು ಹತ್ಯಾಪ. ಕೋಪಿಸ್ಕೊಬೇಡಿ, ಏನ್ ಬ್ರಹ್ಮತ್ಯವೇ, ಸ್ತ್ರೀಹತ್ಯವೇ, ಶಿಶುಹತ್ಯವೇ....ಇಲ್ವಾ, ನೀವೇನು ಮಾಂಸಾದರೇ ?...ಅರ್ಥ್ವಾಗ್ಲಿಲ್ವಾ.

**ರಂಗಣ್ಣ:**—ದಯವಿಟ್ಕೇಳೀ, ನೀವ್ಹೇಳೋ ಹತ್ಯಗಳ್ನ ನಾನ್ಮಾಡಿದ್ರೇ ಆದ್ರೆ, ಸನ್ನಿಧಾನ ಇರ್ಲೀ...ಸರ್ಕಾರಾನೇ ಗಲ್ಲಿಗ್ಹಾಕ್ತಿತ್ತನ್ನ. ಇನ್ ಮಾಂಸಭಕ್ಷಣ್ಯೋ.... ಮಾಂಸಭಕ್ಷಿಗಳು, ಮದ್ಯಪಾಯಿಗಳು ಆದ ಎಷ್ಟೋ ಧನ್ವಂತ ಬ್ರಾಹ್ಮಣ್ರಿಗೆ ಇರೋ ಧನ ನನಗೂ ಇದ್ದಿದ್ರೆ, ಅವರಿಗುಳ್ಳಿರೋ ಬ್ರಾಹ್ಮಣ್ಯ ನನಗೂ ಉಳೀತಿತ್ತು....ನಾನೋ ನನ್ಧರ್ಮದಲ್ಲ್ಯೋ ಎಷ್ಟ್ರಮಟ್ಟಿಗೆ ಈ ಕಲಿಯುಗದಲ್ಲಿ, ಬ್ರಾಹ್ಮಣ, ಗೃಹಸ್ಥ, ತನ್ಜಾತೀ ಧರ್ಮಾನ ಜರಗ್ಸೋಕೆ ಸಾಧ್ಯವೋ ಅಷ್ಟನ್ನೂ, ಎಳೀಬಿಡದೇ ನತಸ್ತಾ ಬಾದಿಪ್ರೂನೂವೇ...ನನ್ಮ ಹತ್ಯಾಪ, ನನಗಾ ಲಕ್ಷ್ಮೀಕಟಾಕ್ಷವಿಲ್ಲದ್ದು. ಧನಪಿಶಾಚಿ ಬಾಯ್ಬಿಡ್ದು, ಆ ಧನದಾವೇಶ್ದಲ್ಲಿರೋ ಸಮಾಜ, ಧನವಿಲ್ದಿರೋ ನನ್ಮೇಲೆ ಎತ್ತಿರೋ ಕೈಯನ್ನ .... ಸನ್ನಿಧಾನಾನೂ, ಅನುಮೋದಿಸಿ, ಧನಸಂಚಯನ ಮಾಡೋ ವೈಶ್ಯ ವೃತ್ತೀನೂ ಸ್ವಧರ್ಮದಲ್ಲಿ ಸಂಯೋಗಿಸಿದ ಬ್ರಾಹ್ಮಣ ಬ್ರಾಹ್ಮಣ್ನೇ ಹೊರ್ತು, ಧನ್ವಿಲ್ದ ಬ್ರಾಹ್ಮಣ ಅಬ್ರಾಹ್ಮಣಾಂತ ತೀರ್ಮಾನಿಸಿ, ಬಹಿಷ್ಕಾರಾನ ಕರುಣಿಸಿದ್ದು....ತಾವ್ಹೇಳ್ದ ಕರುಣಾಪೂರಿತರಾದ ಶಾಂತಿಮೂರ್ತಿ....ಸನ್ನಿಧಾನ... ಈ ಕಾಲ್ದಲ್ಲಿ ಭಾಗ್ಯವಂತ್ರಿಗೆ ಬ್ರಾಹ್ಮಣ್ಯೇನೇ ಹೊರ್ತು, ಭಾಗ್ಯವಿಲ್ದ ಬಡವ್ರಿಗೆ....ಬಹಿಷ್ಕಾರ. ....ನನ್ಚರಿತ್ರೇನ ವಿವರಸ್ತೇನೆ.... ಅದನ್ನ ತಾಳ್ಮೆಯಿಂದ್ಕೇಳಿದ್ಮೇಲೇನೇ ತಮ್ಮುಂದಿನ್ಕ್ರಮಾನ ಯೋಚಿಸಿ ನಿರ್ಣಯಿಸ್ಕೋಬೇಕು. ನನ್ಗಾರ್ಹಸ್ತ್ಯ ಧರ್ಮಾನ ಯಥಾವಿಧಿ ಜರಗಿಸ್ತಿದ್ದೆ...,ನನ್ಹೊಟ್ಟೇಲ್ಹುಟ್ಟಿದ್ಮಗ್ಳು ವಿವಾಹವಯಸ್ನ ಹೊಂದಿದಾರಭ್ಯ....ವರನ್ನಿಶ್ಚಯ್ಸೋಕೆ ನಾನ್ಪಟ್ಕಷ್ಟ ಅಷ್ಟಿಷ್ಟಲ್ಲ,....ಆದ್ರೆ ನಾನ್ಮೇಲ್ಹೇಳ್ದಂಗೆ ಧನಪಿಶಾಚಿಗೆ ದಾಸರಾದ ಸಮಾಜ ವಿಪರ್ಟ್ಸಿರೋ ವರಶುಲ್ಕಕ್ಕೆ ಪವಗ್ಸೋ ಹಣ, ಕೇವ್ಲ ಬಡ ಬ್ರಾಹ್ಮಣ್ನಾದ ನನ್ನಲ್ಲಿ ಇಲ್ಲದ್ರಿಂದ ವರ ಸಿಕ್ಲಿಲ್ಲ....ಸಮಾಜ, ಸನ್ನಿಧಾನಗಳ ವಿಪರ್ಯಾಟಿಗೆ ಒಳಪಡ್ದ ಪ್ರಕೃತಿ ನನ್ಮೇಲ್ಕನಿಕರ್ವಿದ್ದೇ

ಕಾಲಕ್ರಮೇಣ ನನ್ನ ಪುತ್ರೀನಾ ರಜಸ್ವಲೆಯನ್ನಾಗಿ ಮಾಡ್ಬಿಟ್ಲು .... ಇನ್ನು, ಅವಿವಾಹಿತಳಾದ ರಜಸ್ವಲೇನ ಮನೆಯಿಂದ ವದ್ದೋಡಸ್ದೆ ಇರೋ ಬ್ರಾಹ್ಮಣ, ಚಂಡಾಲ್ನಿಗೆ ಸಮಾನ ಅಂತಾ ತೀರ್ಮಾನ್ಸಿ ಬಹಿಷ್ಕಾರ ಕರುಣ್ಸಿದ್ದು....ಸನ್ನಿಧಾನ.....ಇದ್ರ ಫಲ ಎರ್ಡ ವರ್ಷದ ಶ್ರಾದ್ಧ ತಪ್ಹೋಯ್ತು ನಮ್ತಂದೇಗೆ. ಆ ಮೇಲ್ಸತ್ನನ್ತಾಯಿ ನನ್ಕೈಯಿನ್ಪಿಂಡ ಮುಟ್ದೇ ಇರೋ ನಮ್ತಂದೇನ ಸೇರೋ ವಿಷ್ಯದಲ್ಲಿ ಸಂದೇಹಪಟ್ಕೊಂಡು ಪ್ರಾಣ ಬಿಟ್ಳು. ಅವ್ಳು ಹೋದಮೇಲೋ ನನ್ನೈಹಿಕಸ್ಥಿತಿ ಸ್ವಲ್ಪ ಗುಣ್ವಾಗಿ, ಸರ್ಕಾರಿ ಉದ್ಯೋಗದಲ್ಲಿ ಇರೋ ನನ್ಗೆ ವರ್ಮಾನ ಹೆಚ್ಚುತ್ಲೂನೂವೇ.... ಮಿಕ್ತ್ರನೆಗ್ಳಲ್ಲಿ ಎಂಟಾಣೆಗೆ ಪಡೋ ತರ್ಪಣಕ್ಕೆ ಮುಂದೊದಗ್ಬಹುದಾದ ಪ್ರಾಯಶ್ಚಿತ್ತಕ್ಕೇಂತ ಎಂಟ್ರೂಪಾಯಿ ನನ್ನಿಂದ ಸುಲ್ಕೊಂಡು. ಶ್ರಾದ್ಧಕ್ಕೂನೂವೇ ಮುಕ್ಕೋರ್ಮನೇಲ್ಸಂಪಾದ್ನೋದ್ರು ಹತ್ರುಷ್ಟು ನನ್ಹತ್ರ ಎಳ್ಕೊಂಡು ಈ ಎರ್ಡ ವರ್ಷ್ದ್ರ ನಮ್ಮನೇ ಕೃತ್ಯಗಳ್ನ ನನಗ್ಬಹಿಷ್ಕಾರ ಬಿದ್ದಿದ್ರೂನೂವೇ, ಸಾಂಗೋಪಾಂಗ್ವಾಗಿ ನಡಸ್ತಲೇ ಇಧಾರೆ ಬ್ರಾಹ್ಮಣ್ರು. ಅದೇ ಪ್ರಕಾರ ನಿಮ್ಗೂನೂ ಕಟ್ಲೆ ಎರ್ಪಡ್ಸೋ ಸಂಭಾವ್ನೆಗೆ ಹತ್ರುಷ್ಟು ಒದಗ್ಸೋಕ್ಕಾನೂ ಸಿದ್ಧ. ಆದ್ರೆ ನಿಮಗಿದನ್ನೆಲ್ಲಾ ವಿವರ ಸ್ದೇನೇನೆ ನಿಮ್ಕೈಯಿಂದ ನನ್ಕೃತ್ಯಾನ್ಮಾಡಸ್ಕೊಂಡು ಮುಂದಕ್ಕೆ ನಿಮ್ಮನ್ನ ನಿಗ್ಧಾಕಿದ ಪಾಪ ನನ್ತಲೇ ಮೇಲೆ ಬೀಳ್ಬಾರ್ದು ಅಂತ ವಂಚ್ನೆ ಇಲ್ದೆ ವಿವರ್ಸಿದ್ದು, ನನ್ಚರಿತ್ರೇನ....ಅಕೋ ನೋಡಿ....ಈ ಬೀದಿಯುದ್ದಕ್ಕೂ ಎರ್ಡಾಸಲುಗಳೂ....ಸ್ವಜ್ಞಾತಿಗ್ಳ ಮನೆಗ್ಳು..... ಇವ್ರುಗಳೊಂದೊಂದ್ಮನೇಲೂ, ಅನ್ಯೋನ್ಯ ಐಕ್ಮತ್ಯಗಳ್ನ ಕೊಡ್ಡಿದ್ರೂನೂವೇ, ಪರಸ್ಥಳದ ಬ್ರಾಹ್ಮಣ್ರುಗನ್ನಾಹಾಕೋ ಯೋಗ್ತೆ ಕೊಟ್ಟಿಧಾನೆ ದೇವ್ರು ಸಂಕುಟಂಬಕ್ಕೆಲ್ಲಾ....ಆದ್ರಿಂದ ಒಂದೊಂದ್ಮನೇಲೂ ವಿಚಾರ್ಸಿ....ನನ್ಚರಿತ್ರೇನ ಚನ್ನಾಗರಿತು ಸಜ್ಞಾತಿಗಳ್ಕಥೇನೂ ಕೇಳಿದ್ಮೇಲೆ, ನಿಮ್ಮನಸ್ಸಂಪೂರ್ಣ್ವಾಗೊಪ್ಪಿ .... ನಮ್ಮನೇ ಕರ್ಮಗಳ್ಗೊಪ್ಕೊಂಡು ನನ್ಪಿತೃಗಳಿಗ್ಪಿಂಡಾನ್ತಲ್ಪೋನೇ ಸಹಾಯಾನ್ಮಾಡೋಕೆ ನಿಮಗಿಷ್ಟ್ವಗಿದ್ಪಕ್ಷಕ್ಕೇನೇ...ನನಗೂ ನನ್ಗೃಹಿಣೀಗೂ ನಂಪಿತೃಗಳಿಗೂ

ತೃಪ್ತೀ ಅಂತನ್ನೇಳ್ಬೇಕಾದ್ದನ್ನಾರ .... ನಾವೀಗನ್ದೃಷ್ಟಂದ ಕಾಳವಮ್ಮನ್ನಡಿ ಪ್ರಾಕಾರ್ದಲ್ಲೇ ಕಾದಿರ್ತೇನೆ. ಹೋಗ್ಬನ್ನಿ.

**ಬ್ರಾಹ್ಮಣ್ರು**:—ಆದಕ್ಕೇನು ನನ್ನಪ್ಪಾ? ನಿಮ್ಮಿಷ್ಟವಿದ್ದಂತೇ ಆಗ್ಲಿ.

[ರಂಗಣ್ಣನು ಹಿಂದಕ್ಕೂ ಬ್ರಾಹ್ಮಣರು ಮುಂದಕ್ಕೂ ಹೋಗುವರು.]

---

## ತೃತೀಯ ರಂಗ.

**ಸ್ಥಾನ**:—ರಂಗಣ್ಣನ ಮನೆ ಮುಂದಿನ ಕೋಣೆ.

[ರಂಗಣ್ಣನ ಐಹಿಕಸ್ಥಿತಿಯು ಗುಣವಾಗಿರುವುದು: ಕೋಣೆಯಲ್ಲಿ ಏರ್ಪಡಿಸಲ್ಪಟ್ಟಿರುವ ಕುರ್ಚಿ, ಮೇಜು, ನಿಲುಗನ್ನಡಿ ಇತ್ಯಾದಿಗಳಿಂದ ವ್ಯಕ್ತಪಡುವುದು.]

(ಕಾಲ:—ದ್ವಿತೀಯ ರಂಗದ್ದು)

[ವೆಂಕಟಲಕ್ಷ್ಮಮ್ಮನೂ ನರಸುವೂ ಪ್ರವೇಶಿಸುವರು.]

**ನರಸು**:—ಅವ್ಮಾ, ಅನ್ನತ್ತಿಳಿಯೇಳ್ಸಿ .... ಗಂಜೀ ಒಸ್ತ್ರ ದ್ದಾಯ್ತು .... ತರ್ಕಾರಿ .... ಗಡ್ಡೆಗೆಣ್ಸುಗ್ಳು ಬೇಯ್ತಾ ಇವೆ. .... ಇನ್ನೇನವ್ಮಾ?

**ವೆಂಕಮ್ಮ**:—ಬಾಳೇಯೆಲೆ ಕಟ್ಬಿಚ್ಚಿಡು .... ಇದೋ ಬಂದೆ ನಾನೇ (ನರಸುವು ನಿಷ್ಕ್ರಮಿಸುವಳು) .... ಕಿಟ್ಟೂ ಯಾಕ್ಬರ್ಲಿಲ್ವೋ ಇನ್ನೂ.. ಇನ್ನಿವರ್ಹೋದ್ಮೇಲ್ಮೇನಾಯ್ತೋ ಕಾಣ್ಲಿಲ್ಲಾ.... ಇದ್ಯಾವ ಪುರಾಕೃತ ಪಾಪದ್ಫಲ್ವೋ .... ಇದೆಂಥಾ ಪರೀಕ್ಷೆಯೋ .... ದೇವ್ರೇ ಬಲ್ಲ....ಸದ್ಯ ಇವತ್ತಿನ್ಕರ್ಮಕ್ಕೆ ಇಬ್ರುಬ್ರಾಹ್ಮಣ್ರು ಸಿಕ್ಕಿದ್ರಲ್ಲಾ ಅದ್ಹಾಗಾಯ್ತು....(ಕಣ್ಣುಗಳಿಂದ ಕೇಳುತ್ತಾ)ಯಾರು! ಇವ್ರೇನೋ! ಅಲ್ಲಾ....ಕಿಟ್ಟೂ.

**ಕಿಟ್ಟೂ**:— (ಪ್ರವೇಶಿಸಿ) ಇಕೋವ್ಮಾ ಪಂಚೆಗ್ಳು .... ಇನ್ನೇನ್....ಸ್ನಾನಾ ಮಾಡಿ...ಧೋತ್ರುಗಳ್ನ ನೆನಸಿ ಒಣಗ್ಹಾಕ್ಲೇದ್ಯಾನೆ?

**ವೆಂಕಮ್ಮ** :—ಹೂಂ.

**ಕಿಟ್ಟೊ** :—( ಬೀದೀಬಾಗಿಲ ಕಡೆ ತಿರುಗಿ ) ಅಕ್ಕೋ ಅಪ್ಪೊ ಬಂದ...ಮುಖಾನ್ನೋಡಿದ್ರೆ, ಬ್ರಾಹ್ಮಣ್ರು ಸಿಕ್ಕಿದ್ಹಾಗ್ಯೇ ಕಾಣುತ್ತೆ; ನಾನಿನ್ ಸ್ನಾನಕೊಡ್ಡರಷ್ಟೇನಪ್ಪಾ! ಹಂಡೇಲ್ನೀರಿಧೆ ತಾನೆ?

**ವೆಂಕಮ್ಮ** :—ಹೂಂ ನೀರೂ ಸೇದಿ...ಹಂಡೇನೂ ತುಂಬಿ..., ಕಟ್ಗೇನೂ ತಾನೇ ಒಡ್ದು....ಕಾಸಿಟ್ಟಿದಾಳೆ....ನಡ್ಸಿ....

[ಕಿಟ್ಟು ನಿಷ್ಕ್ರಮಿಸುವನು. ರಂಗಣ್ಣನು ಪ್ರವೇಶಿಸುವನು.]

**ವೆಂಕಮ್ಮ** :—ಸಿಕ್ಕಿದ್ರೇ...ಬ್ರಾಹ್ಮಣ್ರು ?

**ರಂಗಣ್ಣ**:—(ಏಗತಾಳಿಯಿಂದ)ಸಿಕ್ಕಿದ್ರಾಂದು.... ಅದ್ರುವ್ರು... ಬ್ರಾಹ್ಮಣ್ರೋ! ಅಲ್ರೋ! ನನಗಿನ್ನೂ....ಸಂದೇಹವೇ !

**ವೆಂಕಮ್ಮ** :—(ಆತುರದಿಂದ) ಇದೇನಿದೂ?....ಅರ್ಥಾಗ್ಲಿಲ್ಲ ನನ್ಗೆ....ಯಾರದು ವೊಪ್ಕೊಂಡಿರೋದೂ . . . . ನಮ್ಮೂರಲ್ಲೀ ? . . . .ನಮಗ್ತಿಳೀದವ್ರು ?

**ರಂಗಣ್ಣ**:—ಯಾರೇನೂ? (ತಾತ್ಸಾರವಾಗಿ)ಈ ವೂರ್ನೋರು ರೂಂಬೋ ಚಪ್ಲ....ಇನ್ನೂ ಇಟ್ಕೊಂಡಿದಿಯಾ ನಿನ್ಮನಸ್ನಲ್ಲಿ?....ಬೆಳಗ್ಗಿಂದಾ ತಿರ್ಗೀ ತಿರ್ಗೀ .... ವೂರ್ನಾಕ್ಳ ಸೇರಿ ... ಸುಂಕದ್ಕಟ್ಟೇಲ್ಕೂತಿದ್ದೆ....ಕಾಲ್ನ್ನೇತು....ಬಂದ್ಸೇರಿದ್ರಿಬ್ರು ಪರಸ್ಥಳ್ದ ಬ್ರಾಹ್ಮಣ್ರು.... ಕೇಳಿದರ್ಯಥಾಪ್ರಕಾರ...ವೂರ್ಹ್ಯಾಗಿಧೆ, ಮಳೆ ಹ್ಯಾಗೆ, ಜನಸಂಖ್ಯೆ, ಜನಾರೋಗ್ಯ, ಅಮಲ್ದಾರ್ರ ಹೆಸ್ರು. ಕೊನೇಗೂನೂ .... ಯಥಾ ಪ್ರಕಾರವಾಗ್ಲೇ ಮುಟ್ನೇ ಮುಟ್ಸಿದ್ರು .... ಪ್ರಶ್ನೇನಾ ....ವೂಟದ ಸ್ಕೂಲ್ದ ವಿಷ್ಯಾನ....ಇನ್ನೇನು ಹೇಳ್ಕೊಂಡೆ ಹಣೇಬರಾನ .. ನಿಮಂತ್ರಣಕ್ಕೇಂತ ಆಡ್ತಿದ್ನನ್ನ ಬ್ರಾಹ್ಮಣ್ರ ಬೇಟೇನಾ! ಇನ್ನೊಪ್ಕೊಳ್ಳೋಕೇನವರಿಗಭ್ಯಂತ್ರ! .... ಊಸ್ಕಡೆ ಕಾಲ್ಮಾಕಾತ್ತ .... ಹಣ್ಣಾಜ್ರೋದು! .... ಸಕ್ರೇಪಟ್ಣದಲ್ಬೀಳೋದು! ....ಹಾಲ್ರುಲ್ದವ್ಕೋದು, ಅಂಬೋಉಪ್ಮಾನಾನ....ನಾನ್ಹುಡ್ಕಿ ದಣ್ದು ಸುಂಕದ್ಕಟ್ಟೇಲಿ ಕೂತಿ

ದ್ದದ್ದಕ್ಕೂ, ಅವ್ರೂನೂ ಆ ಕ್ಷಣ್ವೇ ಬಂದು ಸನ್ನಂಧಿಸಿದ್ದಕ್ಕೂ ಹೊಂದಿದ್ದು, ದೈವಸಿಯಾನ್ಕ್ಕ ಅಂತ ಹೇಳ್ಕೊಳ್ತಾ ಬಂದ್ನೇರಿದ್ವಿ ... ನಮ್ಜ್ಞಾತಿಗ್ಳ ಸರ್ಹದ್ನ .... ಇನ್ನೇನ್ನಿನಗೊತ್ತಿಲ್ಲದ್ದು?.... ಬಂತು.... ಹೋದ್ವರ್ಷ ಶ್ರಾದ್ಧದ ಚಾಣ್ಣಾಸ್ಕ .... ಬಂದ್ಬ್ರಾಹ್ಮಣ್ರನ್ನೆಲ್ಲಾ.... ಬಹಿಷ್ಕಾರದ ಗೊಗ್ಗಯ್ಯನ್ತೋರ್ಸಿ, ಹೆದರ್ಸೋಡ್ಸಿದ್ದು....ಇನ್ನನ್ಜ್ಞಾತಿಗ್ಳ ಬಾಯಿಂದ್ಹೊರಟು ಅವ್ರು ತಿಳ್ಕೊಳ್ಳೋಕ್ಬದ್ಲಾಗಿ . . . ನಾನೇ ತಿಳ್ಸೋದ್ಮೇಲೂ ಅಂತ ...ನಮ್ಮನೇ ವಿಚಿತ್ರ ಚರಿತ್ರೇನ....ವಿವರ್ಸಿದ್ದಲ್ದೆ .... ಅವ್ರಿಗೂ ಹೇಳ್ದೆ ಬುದ್ಧಿವಾದಾನ .... ಹಸಿವಿಸ್ಗಲಾಟೇಲಿ ನಮ್ಮನೇ ನಿಮಂತ್ರಣಕ್ಕೊಪ್ಕೊಂಬಿಟ್ಟು, ಮುಂದ್ಬೀಳ್ಬಹುದಾದ ಬಹಿಷ್ಕಾರ್ದ ಅಪಾಯಾನ ಅವ್ರಿಗೆ ಮೊದ್ಲೇ ತಿಳಿಸ್ದೇ ಇದ್ದಾಪ ನನಗ್ಬೇಡ ; ನಮ್ಜ್ಞಾತಿಗಳ್ನ ವಿಚಾರ್ಸಿ, ನಚ್ಚರಿತ್ರೇನ ಅವರ್ಬಾಯಿಂದಲ್ತು, ಆಮೇಲೊಂದ್ವೇಳೆ, ನನ್ನಸ್ಥಿತೀನಾ ಕನಿಕರ್ಸಿ, ಧೈರ್ಯದಿಂದ, ಇವತ್ತಿನ್ಕೆಲ್ಸಾನ್ನಡ್ಸಿಕೊಡೋಕೆ ಒಪ್ಕೋದಾದ್ರೇನೆ ನನ್ಮನಸ್ಸಿಗೆ ನೆಮ್ದಿ ಅಂತ್ಹೇಳಿ ಕಳ್ಸಿಬಿಟ್ಟು, ಹೃದಯಾ ಬೇಯ್ತಾ, ನಾನ್‌ಹಾಕ್ದಂಗಾಜ ಧ್ಗಂಟೇ ಮುಂಚೇನೇ ಬಂದ್ರು ತಿರ್ಗೀ.... ಜಗದ್ವ್ಯವ್ಹಾರವಿಶೇಷಗಳ್ನೆಲ್ಲಾ ವಿವರ್ಸಿದ್ರು .... ಹೊಸ್ದೇನೂ ಇಲ್ಲ....ನನ್ದೊಡ್ಡಪ್ಪನ ಮಗ ತನ್ನಪ್ಪೇ ಅಂಗ್ಡೀನೇ ಇವ್ರ ಮುಂದಿಟ್ಟು....ತನ್ಮನೇ ಮೃಷ್ಟಾನ್ನ ಬಿಟ್ಬಿಟ್ಟು ..."ಈ ವೂರಲ್ಲಿ ಜಾತ್ಕೆಟ್ಟ ರಂಗಣ್ಣನ್ಮನೇಲಿ ತಿಂದ್ಭ್ರಷ್ಟಾನ್ನ ನಿಮ್ಮೆಲ್ರಗೊಗ್ಗೀತೇ?.... ಮತ್ತೆ ಮುಂದ್ಸಂಭವ್ಸೋ ಬಹಿಷ್ಕಾರಾನೂ ತಪ್ಪೀತೇ ನಿಮ್ಗೆ....ಇಲ್ಲ, ಆ ಮನೆ ಧೋತ್ರದ್ಮೇಲೇನಾದ್ರೂ ಚಪ್ಲ ಬಿದ್ಪಕ್ಷಕ್ಕೆ ...ನನ್ನಂಗ್ಡೀಲಿ ನಿಮಗ್ಬೇಕಾದ್ವಸ್ತ್ರಗಳ್ನ ನೀವಾರ್ಸಿಕೊಂಡದ್ರಿಂದ ನನಗೇನೂ ನಷ್ಟವಲ್ಲ....ಇನ್ನಿದನ್ಮೇಲೆ .... ನೀವಲ್ಲೇ ಹೊಗೋದಾದ್ರೆ .... ನಿಮ್ಮೂರ್ನೀವು ಮುಟ್ಟೋಕ್ಮುಂಚೆ ನಿಮ್ಮೇ ಪ್ರತಾಪ ನಿಮ್ಮೂರ್ತ್ನಲ್ಲೋ ವಿಷ್ಯದಲ್ಲೇನೂ ಸಂದೇಹ ಇಟ್ಕೊಳ್ಬೇಡೀ" ಅಂದದ್ನ, ಮತ್ತಿವ್ರು ತಲೇಕೆರೀತ....ಜನಿವಾರಗಳ್ನೀವ್ತಾ, ನ್ಯಾಯಾನ್ಯಾಯಗಳ್ನಾಲೋಚ್ಸಿ "ನಿಮಂತ್ರಣಕ್ಕೇಂತ .... ಬ್ರಾಹ್ಮಣ್ರುನ್ಹುಡುಕ್ತಾ .... ಒಬ್ಗೃಹಸ್ಥ ಕಾದಿರೋವಾಗ .... ಇನ್ನೊಂದ್ಕಡೆ

ಭೋಜ್ನ ಮಾಡೋದು ಮಹತ್ಪಾಪ" ಅಂತ ತೀರ್ಮಾನಿಸ್ಕೊಂಡು ಬಂದ್ಬಿಟ್ಟದ್ನೂ, ಹೇಳ್ಕೊಂಡ್ರು....ಅಲ್ದೇ ನಾನ್ನಿರೀಕ್ಷಿಸ್ದ್ಹಾಗೇನೇ ಕೊನೇಗೆ ಶುಂಠೀನೂ ಸೋಕ್ಸಿದ್ರು....

**ವೆಂಕಮ್ಮ** :—( ಹುಬ್ಬುಗಳನ್ನು ಎತ್ತುತ್ತಾ ) ಶುಂಠೀ ! ! ಅದೇನು ?

**ರಂಗಣ್ಣ** :—(ಅತಿ ಉದಾಸೀನವಾಗಿ) ಏನೇನೋ....ಸನ್ನ್ಹ್ಡುಮ್ಮಸ್ನಿಗೀರೀಗೆ ಆದ ಪ್ರಮೋಷನ್ನು ಬಿತ್ತೂಂತಾಕ್ಕಣತ್ತೆ ಅವರ್ಕಿವೀಗೆ. ಅವರಲ್ಕೊಬ್ನ ಭಾವಮೈದನ್ನ . . . ಇಲ್ಲಿನ್ನಾ ಫೀಸಿಗೆ ಸೇರಿಸ್ಕೊಂಡ್ರೆ ಅವರ್ಕುಟುಂಬಕ್ಕೆಲ್ಲಾ ಮಹದುಪ್ಕಾರ್ವಂತೆ! ಅಲ್ದೇ ನಾಳೇ ಪಂದ್ವೇಳೆ ....ಬಹಿಷ್ಕಾರ . . . ಪ್ರಾಯಶ್ಚಿತ್ತ....ಮುಂತಾದುವುಗ್ಳು ದುರದೃಷ್ಟ ವಶಾತ್ ಒದಗುವ ಸಂಭವಕ್ಕೆ ತಯಾರಾಗಿರೋ ಹಾಗೆ ಸಹಾಯ ಮಾಡಬೇಕಾಗಿರೋ ಮಾತೆತ್ತಿದ್ರು ... ಒಪ್ಪಿಸ್ದೆ ಏಜಂಟ್ ಪಟ್ಟೀನಾ ....ಸನ್ನಿಧಾನದ ರೇಟ್ ಪ್ರಕಾರ ತಲಾ ನೂರುನೂರು ರೂಪಾಯ್ನೂ ಕೈಲ್ಕೊಟ್ಟು . . . ಸಂಪ್ರದಾಯದ್ಪ್ರಕಾರ ... ಸಂಭಾವನ, ವಸನ ಇತ್ಯಾದಿ ಮರ್ರ್ಯಾದೆ, ದಾನಗಳನ್ನೂ ಮಾಡೋಕೊಪ್ಕೊಂಡು, ದೇವ್ಗೆರೆ ಕಟ್ಟೇಲಿ ಸ್ನಾನಕ್ಬಿಟ್ಬಿಟ್ಟು ...ಇಲ್ಬಂದೆ. ಇದಕ್ಕೇ ನಾನು ಸಂದೇಹಪಟ್ಟದ್ದು .... ದುಡ್ಡಾಸೆಪಟ್ಕೊಂಡು ಇವತ್ತಿನ್ಕೃತ್ಯಕ್ಕೊಪ್ಕೊಂಡೋರು, ಬ್ರಾಹ್ಮಣ್ರೂ ಅಲ್ವೋ ಅಂತ....

**ವೆಂಕಮ್ಮ** :— ಏನೋ! ದೇವ್ರಿಷ್ಟ್ರಪಟ್ಗೆ ದಯ್ಬಿಟ್ಟು ಕಳ್ಸಿದ್ನಲ್ಲಾ ! ! ಅವರ್ನಾ....

**ರಂಗಣ್ಣ**:—ಹಯ್ಯೋ ವೆಂಕೂ....ದೇವ್ರೆಲ್ಲೀ ?....ನಾವೆಲ್ಲೀ.... ಬ್ರಾಹ್ಮಣ್ನಿಗ್ಬ್ರಹ್ಮ ಹಣವಾದ್ಮೇಲೆ ಇನ್ನೇವ್ರು ಜೀರ ಇದಾನೆಯೆ ಇವನ್ಗೆ ? ನಾವೀಗಿರೋ ಹಣೇಬರಕ್ಕೆ ದಯ ಬೇರೆಯೋ ಅನ್ನಿಂದ ? ಈ ಹಾಳಿನ್ನೂರ್ರೂಪಾಯ್ನ ಮುಂದಿಟ್ಕೊಂಡು ಬಾ ಬಾ ಅನ್ನದಿದ್ರೆ ಬರ್ತಿದ್ರೇ ಈ ಬ್ರಾಹ್ಮಣ್ರು ?... ಹಯ್ಯೋ! ವೆಂಕೂ, ಇನ್ಮೇಗೆ ಶ್ರಾದ್ಧಕ್ಕುನ್ನೂರ್ರೂಪಾಯಿ....ತಿಂಗ್ಳ ತಿಂಗ್ಳ ಅಮಾವಾಸ್ಯೆ ತರ್ಪಣಕ್ಕೂ

ದ್ನೈದ್ರೂಪಾಯಿ .... ದುರ್ಲಂಚಾಕೊಡ್ತಾ ಎಷ್ಟ್ದನಾ ತಾನೇಂತ ಬ್ರಾಹ್ಮಣಿಕೇನ ಜರಗ್ಸೋದೋ ...ನಾನ್ಬೇರೇ ಕಾಣೆ (ವ್ಯಸನದಿಂದಲೂ, ಹಸಿವಿನಿಂದಲೂ ನಿರ್ವಿಣ್ಣನಾಗಿ ಬಗ್ಗಿ ದುಃಖದಿಂದ ವೆಂಕಟಲಕ್ಷ್ಮಮ್ಮನ ಕೈಯನ್ನು ಹಿಡಿದುಕೊಂಡು) ಹಯ್ಯೋ ವೆಂಕೂ! ಇದ್ರಲ್ಲೆಲ್ಲಾ .... ನೀನೂ .... ಸಿಕ್ಕೊಂಡು .... ಪಡೋ ಕಷ್ಟ ಬೇರೆ ನನ್ಹೃದ್ಯಾನ ತಿನ್ತಿದೇ....ಈ ನನ್ ಹಾಳ್ಕೈನ ಹಿಡ್ದದ್ದಕ್ಕೆ ನಿನ್ಗೀವಯಸ್ನಲ್ಲಿ, ನಿನ್ಮೈಯಿಷ್ಟು, ಮುಖ, ...ಹೀಗಾಗಿ ...ಕೂದ್ಲು ...ಹೀಗ್ನರ್ತು .. ಹಿಂಸೆ ಪಡ್ಬೇಕೊಂತ ಬರ್ದಿತ್ತೇ ನಿನ್ಹಣೇಲಿ ... ಈ ನರ್ಸು ಒಬ್ಳು ಇಲ್ದಿದ್ರೆ?

[ಈ ಸಮಯದಲ್ಲಿ, ನರ್ಸುವು ಹಿಂಬಾಗಿಲಿನಿಂದ ಬಂದು, ರಂಗಣ್ಣನ **ಕೊನೆಯ ಮಾತನ್ನು ಕೇಳಿ, ಮನನೊಂದು ಮುಖ ಕುಗ್ಗಿ ಮಾತನಾಡದೆ ಹಿಂತಿರುಗುವು**ದನ್ನು, ವೆಂಕಮ್ಮನು ಮಾತ್ರ ಗಮನಿಸುವಳು.]

**ವೆಂಕಮ್ಮ :**—(ವ್ಯಥೆಗೊಂಡು ಮೆಲ್ಲನೆ ಗಂಡನ ಕೈಯನ್ನು ಒದರಿ)....ಇನ್ಮೇಲೆ.... ದಯವಿಟ್ಟು.... ಸರಸೂಮಾತ್ನಾ.... ಎತ್ಬೇಡಿ. ಈಗೇನ್.... ಅವಳ್ಮನೋವ್ಯವಸ್ಥೆ .... ನಿಮ್ದಕ್ಕಿಂತ, ಕಮ್ಮೀಂತಾ ತಿಳ್ಕೊಂಡಿದೀರಾ?....ಅವಳ್ಬದ್ಕಿರೋದು (ಸ್ವಲ್ಪ ಸಿಟ್ಟಿನಿಂದ) ಅವಳ್ತಪ್ಪೇ? ಅವಳ್ಮದ್ವೇಗ್ಬೇಕಾದ್ದಣವಿಲ್ಲದ್ದೂ ಅವಳ್ತಪ್ಪೇ? ...ನಿಮ್ತಾಯಿ ಹೋದ್ದಿನ್ದಿಂದ ... "ಯಾಕೀ ಶನೀ ಹುಟ್ಟಿದ್ಲೂ, ಯಾಕೀ ಶನೀ ಹುಟ್ಟಿದ್ಲೂ" ಅಂತ ರಾತ್ರೀ ಹಗ್ಲೂ ಕೇಳೀ ಕೇಳೀ ಮನಸ್ಸೂ ಮುರ್ಕೊಂಡು....ಹಗ್ಲೂ ರಾತ್ರಿ ...ಹುಟ್ಟಿದ್ಪಾಪಾನ ಕೆಲ್ಸದಲ್ಲಾದ್ರೂ ತೀರ್ಸೋಣಾಂತ—ಮೈ ಮುರ್ಯೋ ಹಾಗೆ ಕೆಲ್ಸ ಮಾಡ್ತಿದೆ, ಆ ಮಗು....(ಕಣ್ಣುಗಳನ್ನು ಕೈಗಳಿಂದ ಮುಚ್ಚಿಕೊಂಡು ಅಳುವಳು.)

**ರಂಗಣ್ಣ:**—(ಒಂದು ಹೆಜ್ಜೆ ಹಿಮ್ಮೆಟ್ಟಿ, ಮುಷ್ಟಿಗಳನ್ನು ಬಿಗಿದು ಉದ್ರೇಕದಿಂದ ....) ನಿಜ ...ವೆಂಕೂ....ನಿಜ. . . . ನರ್ಸು ಬದ್ಕಿರೋದವಳ್ತಪ್ಪಲ್ಲ ...ವೆಂಕೂ! ನಮ್ಮನಸ್ಸು, ನಮ್ಬುದ್ಧಿ, ನಮ್ಮಾತ್ಮ....ಎಷ್ಟೇ ದೊಡ್ದು ಅಂತ ನಾವು ಹೊಗಳ್ಕೊಂಡ್ರೂನೂವೆ (ಬಿಗಿದ ಮುಷ್ಟಿಯಿಂದ ಎದೆಯನ್ನು ಗುದ್ದಿಕೊಳ್ಳುತ್ತಾ) ಇದು, ಇದು, ಇದ್ಕೊಕ್ಕಬ್ಬಿರೋವರ್ಗೂನೂ, ಆತ್ಮಕ್ಕೂ, ಬುದ್ಧೀಗೂ, ಅವಕಾಶ್ವೆಲ್ಲೊಕ್ಕಡತ್ತೇ ಹಾಳ್ದೇಹ? ನನಗ್ನೀನ್ನೀನಾಗಿರೋ ಹೊತ್ತಿಗೆ....ಸನ್ದಿಗ್ಧ

ಮೇಲಿ, ನನ್ನ ಹುಟ್ಟಿರೋದು ತಪ್ಪೂಂತೋಚ್ತ್ಲಾ! ಮಕ್ಳೂ ....ಹಕ್ಕಿಗ್ಳೂ....ಹೂವುಗ್ಳೂ... ಹುಟ್ಟೋದ್ರಲ್ತಪ್ಪಿಲ್ಲೀದೂ? ಪ್ರಪಂಚ ಹುಟ್ಟಿದ್ದೇ ಅವುಗಳಿಗಲ್ವೇ? ನನ್ನ ಹುಟ್ಟಿದ್ರುತಪ್ಪೇ? ಅಲ್ಲ; ಬದ್ಕಿರೋ ದ್ರುತಪ್ಪೇ? ಅಲ್ಲ; ತಪ್ಪೇ ಅಲ್ಲ....ಇನ್ನೇನ್ಹೇಳ್ಲಿಲ್ಲಾ..ಅವಳ್ಮದ್ವೇಗ್ಬೇಕಾದ್ದು ಣಾಂತ... ಮದ್ವೇಂದ್ರೇನು? ಕನ್ನಿಕಾದಾನವೋ? ಕನಕಾದಾನವೋ? ಮದ್ವೆಯೋ....ಮದುವಣಿಗರ ಮಾರಾಟವೋ? ದಾನವಾಗಿ ಕನ್ಯೇ ನ್ಕೊಡೋಕಿಷ್ಟಪಟ್ಟ ಬ್ರಾಹ್ಮಣನ್ಹತ್ರ ಧನವಿಲ್ಲದ್ಮಾತ್ರಕ್ಕೆ ಅವನ್ಬ್ರಾ ಹ್ಮಣೀಕೇಗೆ ಕ್ಕೀರ್ತಿಯೇ?...ಬ್ರಾಹ್ಮಣ! ಪಾಪಿ!.... ಬ್ರಹ್ಮಚಾರಿ!.... ತನ್ನಾಚಾರ, ತನ್ನ ಧರ್ಮ, ತನ್ನ ವ್ರತಗಳ್ನ ಜರಗಸ್ಕೊಳ್ತಾ....ತನ್ನ ಪಿತೃಗಳಿಗೆ ತನ್ಕೈಯಿನ್ಪಿಂಡಗ್ಳು ಮುಟ್ಬೇಕಾದ್ದಕ್ಕೆ ಅನುಸರಿಸ್ಬೇಕಾದ ಧರ್ಮಗಳ್ನ ನಡಸ್ತಾ ತನ್ನ ಬ್ರಾಹ್ಮಣ್ಕೇನುಳುಸ್ಕೊಳ್ಳೋಕೆ ತನ್ನ ಪಕ್ದಲ್ಲಿ ನಿಲ್ಲಲೇಬೇಕಾದ ಸಹಧರ್ಮಿಣಿಗೆ ಇವನು ಕಟ್ಟೋ ತಾಳೀಗೆ ಕೂಲಿ, ಈ ನೀಚನಿಗೆ .... ದುಡ್ಡಿನ ಕೂಲಿ! ... ನನಗ್ಬಹಿಷ್ಕಾರ! ನನಗೆ....ಗೃಹಸ್ಥನಿಗೆ! ... ಧನಸಂಚಯಿಸೋದು ನನ್ನ ವೃತ್ತಿ ಅಲ್ಲಾ ಅಂತ ನನ್ಜಾತಿ ವೃತ್ತೀನಾ ಅನುಸರಿಸ್ತಿರೋ ಬ್ರಾಹ್ಮಣನಿಗೆ ಬಹಿ ಷ್ಕಾರ! ....(ಮನೋವ್ಯಥೆಯು ಉನ್ಮಾದದಿಂದ ನಗುತ್ತಾ) ನಗುಬರು ತ್ತನಗೆ. ಸತ್ಯವಾಗ್ಹೇಳ್ತೀನೆ ವೆಂಕೂ, ಇಲ್ಲಿ (ಎದೆಯನ್ನು ಗುದ್ದಿ ತೋರುತ್ತಾ) ನನಗಿಲ್ಹೇಳುತ್ತೆ ...ಬ್ರಾಹ್ಮಣ ಯಾವಾಗ ಹೊನ್ನಿ ನ್ಬಣ್ಣಾ ನೋಡಿ, ಬೆಚ್ಚಿಬಿದ್ದು, ಅದಕ್ಸುವರ್ಣಾಂತ ಹೆಸರಿಟ್ನೋ, ಆಕ್ಷಣ ದಿಂದ ಧನಪಿಶಾಚಿಗೆ ದಾಸ್ನಾದ. ಈ ಪಾಪಿ ಮುಟ್ಟೋಂದ್ಬಿಂಡಾನೂ ಮೇಲ್ಲೋಕಕ್ಕೋಗ್ಲಿಲ್ಲಾ .... ಇನ್ನೆಲ್ಲಿ! .... ಇವನ್ಬಾಯಲ್ಬೋಗ್ಳೂ ಋಷಿಗ್ಳೆಲ್ಲಿ!! .... ಅತ್ರಿ, ಭೃಗು, ವಶಿಷ್ಠ .... ಇವರ್ಹೆಸರುಗ್ಳು ಹೇಳೋಕ್ಕೂಡ ನನಗ್ಹೆದ್ರಿಕೆಯಾಗುತ್ತೆ .... ಇನ್ನೇ ಪಿತೃಗ್ಳ ಗತೀ ಯೇನೂ ಅಂತೀಯೋ....ಇಹದಲ್ಲೂ ಇಲ್ದೆ, ಮೇಲ್ಲೂ ಮುಟ್ದೆ.... ನಾಲ್ ನಾಲ್ ನಾಲಾಗಿ, ಆಕಾಶಕ್ಕೂ ಭೂಮಿಗೂ ಅಡಿಕೆ ನರಗ ಳ್ಹಾಗೆ ನೇತಾಡ್ತಿರೋ ಹಾಗ್ಕಾಣಸ್ತಾರೆ ನನ್ಕಣ್ಗೆ....ಇನ್ನಿವ್ರಿಗೆ ಈ ತ್ರಿಶಂಕು ನರಕದಿಂದ ವಿಮೋಚ್ನೆ ಯಾವಾಗ ಅಂತ್ಕೇಳ್ತೀಯೋ....

ಇನ್ಮುಂದೆ ಯಾವ ಬ್ರಾಹ್ಮಣ ಹಣದ್ಮೇಲೆ ಹೇಸ್ಗೆಪಟ್ಕೊಂಡು ಹುಟ್ತಾನೋ, ಪುಣ್ಯಾತ್ಮ, ಅವನ್ಕೈ ತಿಲೋದ್ಕದ ಯೋಗ್ಯತೇನ, ಹೇಳೋವಕ್ಕನಗ್ಯೋಗ್ತೆ ಇಲ್ಲ....ಆದ್ರೂನೂವೇ ಈ ಧನಕ್ಕಡ್ಬೀಳೋ ಪಾಪೀ ಬಾಯ್ಗೆ ಹುಯ್ಬೇಕಾದ್ದುರ್ಲಂಚಾನ ಆ (ಲಕ್ಷ್ಮಿಯ ಚಿತ್ರಪಟವನ್ನು ತೋರಿಸುತ್ತಾ) ಚಂಚ್ಲಕಟಾಕ್ಷಿ....ಎಷ್ಟು ವರಿಗೆ ವದಗಸ್ತಿರ್ತಾಳೋ ಸರ್ವ್ಕೈಗೆ ಅಷ್ಟು ವರಿಗಾದ್ರೂ ಈ ಮಾಮೂಲ್ ಏರ್ಪಾಡ್ಕೆ ಬ್ರಾಹ್ಮಣ್ಕೇನಾದ್ರೂ ಬಗಸ್ತಿರೋಣ... ನೆನಸೋಣಗ್ನು ....ಧೋತ್ರಾನಾ....ನೆನಸ್ಸೋಣಗ್ನು.

(ಪರದೆಯು ಥಟ್ಟನೆ ಬೀಳುವುದು.)

---

## ಚತುರ್ಥ ರಂಗ.

ಕಾಲ:—ಏಳು ವರ್ಷಗಳ ಅನಂತರ.

**ಸ್ಥಾನ:**— [ಯಥಾಪೂರ್ವಂ; ಕೋಣೆಯಲ್ಲಿರುವ ಸಾಮಾನುಗಳು, ರಂಗಣ್ಣನ ಸ್ಥಿತಿಯು ಬಹುಧಾ ವರ್ಧಿಸಿರುವುದೆಂಬುದನ್ನು ಸೂಚಿಸುವುವು....ದೊಡ್ಡದೊಂದು ನಿಲುಗನ್ನಡಿ ; ....ಮೇಜಿನಿಂದ ಪ್ರತ್ಯೇಕವಾಗಿ ವಿಂಗಡಿಸಲ್ಪಟ್ಟಿರುವ ಕೋಣೆಯ ದಕ್ಷಿಣಾಂಶದಲ್ಲಿ ಮಂಚದ ಮೇಲೆ ನರಸು ಜ್ವರದಿಂದ ನರಳುತ್ತಾ ಹೊರಳುತ್ತಿರುವಳು.]

**ವೆಂಕಮ್ಮ:**—(ಪ್ರವೇಶಿಸಿ) .. (ಮೇಜಿನ ಮೇಲೆ ಬಿದ್ದಿರುವ ಟಪ್ಪಾಲಿನಿಂದ ಬಂದ ಲಕೋಟೆಯನ್ನು ಗಮನಿಸಿ) ಇದೇನ್ದೂಬಗೆರ?.... ಹಾಗಾದರೆ ಇಷ್ಟ್ಬೇಗ್ನೆ ಬರದ್ಬಿಟ್ಟಿದಾರೆ ಜವಾಬು !! ಏನೂಂತ ಬರ್ದಿದಾರೋ ಕಾಣೆ!....ಜಾತ್ಕಾನೂ ಕಳ್ಸಿತ್ತಲ್ಲಾ !!....(ಭ್ರುಕುಟಿ ರಚನೆಯನ್ನು ಮಾಡುತ್ತಾ) ಏನೂಂತ ಬರ್ದ್ದಾರವ್ರುತಾನೇ....ನಮ್ಮನೇ ಹಣೇಬರ ಹೀಗಿರೋವಾಗ .... ನಮ್ನರ್ಸೂನ್ಮದ್ವೆ ಇಲ್ದೆ ಮನೇಲಿಟ್ಕೊಂಡಿರೋವರೆಗೂ ಕನ್ಯಾದಾನ ಯಾರ್ಮಾನೆ ಮಾಡ್ಯಾರ್ನವ್ಕಿಟ್ಟೂಗೆ? ...ಇನ್ನಿದುವರ್ಗೂ....ನಾವ್ಪಟ್ಟಿರೋ ಕಷ್ಟಗ್ಳಲ್ದೇ ಇನ್ಯಾವ್ಯಾವವಸ್ಥೆಗಳ್ಕಾದಿವ್ಯೋ ಕಾಣೆ....

**ನರಸು**:—ಹಯ್ಯೋ! ಹಯ್ಯೋ!!....ಹಯ್ಯೋ!!!....ಅವ್ಮಾ.... ಅವ್ಮಾ....ಎಲ್ಲಿದೀಯವ್ಮಾ?

**ವೆಂಕಮ್ಮ**:—(ಮಗಳ ಪಕ್ಕಕ್ಕೆ ಓಡಿಬಂದು) ಏನ್ಕಂದಾ?.... ಹ್ಯಾಗಿದೆ ಈಗ? (ನರಸುವಿನ ಮುಖವನ್ನು ಕೈಗಳಿಂದ ಹಿಡಿದು ಕೇಳುವಳು.)

**ನರಸು**:—(ಸನ್ನಿಸೂಚಕ ದೃಷ್ಟಿಯಿಂದ ತಾಯಿಯನ್ನು ಈಕ್ಷಿಸುತ್ತಾ, ನೊಂದ ಕಂಠಸ್ವರದಿಂದ) ಹಯ್ಯೋ ಅವ್ಮಾ ...ಹ್ಯಾಗಿದೇಂತ್ಹೇಳ್ಳವ್ಮಾ....ನಾಲಿಗ್ಯೋ....ಒಣಗ್ಬೆಂಡಾಗಿದೆ .... ತಲ್ಯೋ ಸಾವಿರ ಸೂಜಿಗ್ಳು ಚುಚ್ಚಿದ್ಹಾಗೆ ಎಲ್ಲೋಡಿದ್ರೂ ಪೋಟುಗ್ಳು....ಇವಲ್ದೇ ಅವ್ಮಾ....ಕನಸುಗ್ಳು....ಹಾಳ್ಕನಸುಗ್ಳು ಅವ್ಮಾ....ಸುತ್ಗೆ....ಸೀಸದ್ಸುತ್ಗೆಯಿಂದ್ಹೊಡ್ದ್ಹಾಗೆ .... ಜಜ್ತಿವೇವ್ಮಾ .... ತಲೇನ್ಜಜ್ತಿವೆ .... "ಕಿಟ್ಟೋಗ್ಮದ್ವೆ" "ಕಿಟ್ಟೋಗ್ಮದ್ವೆ" .... "ಮದ್ವೇ ಎಲ್ಲಾದೀತ್ಕಿಟ್ಟೋಗೆ?"....."ಹೆಣ್ಯಾರ್ಕೊಟ್ಟಾರು?"...."ಈ ಹಾಳ್ನರ್ಸು....ಬದ್ಕಿರೋವರ್ಗೂ"...."ಈ ಶನಿ ಯಾಕ್ಹುಟ್ಟಿದ್ಳೋ ಮನೇಲೀ" ಅಂತವ್ಮಾ! ಈಗ....ಈಗ....ನನ್ಕಿವೀಲಿ....ಯಾರೋ ಕಿರ್ಚಿದ್ಹಾಗಿತ್ತೂ...ಅವ್ಮಾ.... ಕನ್ಸು....ಹಯ್ಯೋ....ಗಂಟ್ಲೊಣ್ಗ್ತ್ದೇವ್ಮಾ....ನೀರು....ನೀರು....

**ವೆಂಕಮ್ಮ**:—ನೀರ್ಬೇಡ ಕಂದಾ (ಪಕ್ಕದಲ್ಲಿಟ್ಟಿರುವ ಹಾಲನ್ನು ಲೋಟಾಕ್ಕೆ ಬಗ್ಗಿಸಿ ನರಸುವಿಗೆ ಕುಡಿಸುತ್ತಾ) ಸದ್ಯ ಈ ಹಾಲ್ಕುಡೀ! ಡಾಕ್ಟರಿಗ್ಹೋದ್ಕಿಟ್ಟೊ ಇನ್ನೇನ್ಬಂದ್ಬಿಡ್ತಾನೆ. [ನರಸು, ಅಲ್ಪ ಶಾಮಿತಳಾಗಿ ತಲೆಯನ್ನು ದಿಂಬಿಗೆಳಿಸುವಳು....ಸಮೀಪಿಸುವ ಹೆಜ್ಜೆಗಳ ಸಪ್ಪಳವನ್ನು ಕೇಳಿ ವೆಂಕಮ್ಮನು ಬೀದಿ ಬಾಗಿಲನ್ನು ತೆಗೆಯುವಳು.]

[ರಂಗಣ್ಣ, ಡಾಕ್ಟರ್ ಲಕ್ಷ್ಮೀಪತಿ, ಮತ್ತು ಕಿಟ್ಟೊವು ಡಾಕ್ಟ್ರ ಔಷಧಿಗಳ ಚೀಲವನ್ನು ಹಿಡಿದುಕೊಂಡೂ, ಪ್ರವೇಶಿಸುವರು.]

**ಲಕ್ಷ್ಮೀಪತಿ**:—Patient ಹ್ಯಾಗಿದ್ಲು ಕಿಟ್ಟೊ? ... ನೀನ್ಮನೆ ಬಿಟ್ಟಾಗ?

**ರಂಗಣ್ಣ**:—(ಲಕ್ಷ್ಮೀಪತಿಯ ಕೈಹಿಡಿದುಕೊಂಡು ಪ್ರವೇಶಿಸಿ) Patientoo? .... Patientsoo ಅನ್ನು, ಲಕ್ಷ್ಮೀಪತೀ .... ನೀನ್ನ ಮರ್ರ್ಬಿಟ್ಹೋದೀ ಎಂಟ್ವರ್ಷದಲ್ಲೀಮನೇಲ್ಯಾರ್ರಾನೇ .... ಯಾವಾಗ್ರಾನೇ.... ಮೈಕೈಲೂ....ಮನಸ್ಲೂ ಬುದ್ಧೀಲೂ ...ಅಸ್ವಸ್ಥವಾಗಿಲ್ಲ?

**ಲಕ್ಷ್ಮೀಪತಿ**:—(ರಂಗಣ್ಣನ ಬೆನ್ನು ತಟ್ಟುತ್ತಾ ಸಾಂತ್ವನ ಸ್ವರದಿಂದ) **I understand, dear boy.....I understand**....ಸದ್ಯ ಈಗ್ನರ್ಸ್ಸ ಹ್ಯಾಗಿಧಾಳೆ?

**ವೆಂಕಮ್ಮ**:—ಈಗ್ರಾನೆ ... ಗಂಟ್ಲು ಒಣಗಿದೆ....ತಲೆ ಭಾರ ಅಂತ್ಹೇಳ್ಕೊಂಡ್ಳು....ಜ್ಞಾನ ಕೂಡ ತಪ್ಪಿರೋ ಭಯವಾಗುತ್ತೆ.... ಹ್ಯಾಗಿದ್ದೀರ್ಡಾಕ್ಟ್ರೇ? ಮನೇಲೆಲ್ಲಾ ಸೌಖ್ಯವೇ?

**ಲಕ್ಷ್ಮೀಪತಿ**:— ಸಮ್ಯಾಖ್ಯ ಹಾಗಿರ್ಲಮ್ಮ....(ರಂಗಣ್ಣನಿಗೆ) ಜ್ಞಾನ ತಪ್ಪಿದೆಯೋ ಇಲ್ವೋ .... ನನ್ನುಗ್ರ್ರುವ್ಳಿಗೆ ಸಿಗೋದ್ರುಲ್ಲೇ ಗೊತ್ತಾಗುತ್ತೆ!

[ವೆಂಕಮ್ಮನು ರಂಗಣ್ಣ, ಲಕ್ಷ್ಮೀಪತಿ, ಔಷಧಿಯ ಚೀಲವನ್ನು ಹಿಡಿದಿರುವ ಕಿಟ್ಟು, ಇವರುಗಳನ್ನು ನರಸುವಿನ ಹಾಸಿಗೆ ಹತ್ತಿರಕ್ಕೆ ಕರೆದುಕೊಂಡು ಹೋಗುವಳು.]

**ರಂಗಣ್ಣ**:—(ನರಸುವಿನ ಮುಖವನ್ನು ಸವರುತ್ತಾ ಬಾಷ್ಪ ಭರಿತನಾಗಿ) ನರ್ಸೂ....ನರ್ಸೂ....ಇದ್ಯಾರಮ್ಮಾ ಬಂದಿರೋದು?.... ನೋಡು, ಇದ್ಯಾರು ಹೇಳ್ಕೋಡೋಣ.

[ನರಸುವು ನಿಶ್ಚಲ ದೃಷ್ಟಿಯಿಂದ ಲಕ್ಷ್ಮೀಪತಿಯನ್ನು ಗಮನಿಸುವಳು.]

**ಲಕ್ಷ್ಮೀಪತಿ**:— ನರ್ಸಮ್ಮಾ .... ನರ್ಸೂ .... ಇಲ್ನೋಡಮ್ಮಾ (ನಾಡಿಯನ್ನು ಪರೀಕ್ಷಿಸುತ್ತಾ) ಇದ್ಯಾರಮ್ಮಾ ಇದು....ಮಾತಾಡ್ತಿರೋದು....ನಾನ್ಯಾರ್ನರ್ಸೂ?

[ಡಾಕ್ಟರ ಧ್ವನಿಯು ಕೇಳುತ್ತಲೇ, ಕಣ್ಣುಗಳಲ್ಲಿ ಕ್ರಮೇಣ ಬೆಳಕೇರಿ ಥಟ್ಟನೆ ತಲೆಯನ್ನೆತ್ತಿ ಕೈಯಿಂದ ಸೂಚಿಸುತ್ತಾ ಚೀತ್ಕರಿಸುತ್ತಾ]

**ನರಸು** :—ಡಾಕ್ಟ್ರು!!! ............... ಅಜ್ಜಿ ಸಾಯೋವಾಗ ಇದ್ದಾಕ್ಟ್ರು! (ಕಣ್ಣೀರನ್ನು ಕಾರುತ್ತಾ, ಬಾಹುಗಳನ್ನು ಒದರುತ್ತಾ) ಡಾಕ್ಟ್ರೇ? ಈಗ್ಗೊತ್ತಾಯ್ತು ಡಾಕ್ಟ್ರೇ! ಅಜ್ಜಿ ಸಾಯೋವಾಗ ...''ಯಾಕಮ್ಮ ಬಿಟ್ಟಿದ್ದೀಕಸೀ'' ಅಂತ....ಅಜ್ಜಿಸೂ ಅಪ್ಪೂವೇ.... ನನ್ನ ಬೈದವ್ರು ...ಈಗರ್ಥ್ವಾಗ್ತಿದೆ, ಡಾಕ್ಟ್ರೇ! ... ಡಾಕ್ಟ್ರೇ! (ದಣಿದು ಅಧೋಮುಖಳಾಗಿ ಮಂಚದಂಚಿಗೆ ಬೀಳುವಳು.)

**ಲಕ್ಷ್ಮೀಪತಿ** :—Ranganna! she is bad....very bad (ನರಸುವನ್ನು ಮೆಲ್ಲಗೆ ಹಾಸಿಗೆಯಲ್ಲಿ ಮಲಗಿಸಿ, ವೆಂಕಮ್ಮನಿಗೆ) ಬಿಸ್ನೀರೂಪ್ಮಾ....ಬೇಗ ...(ಕಿಟ್ಟೂಗೆ) ಕಿಟ್ಟೂ ...ಬೇಗ್ನೆ...bagನಲ್ಲಿ.... ಚಿಕ್ಸೀಸೆ.... white powderoo .... label veronal .... (ಕಿಟ್ಟೂ ಚೀಲದಿಂದ ತೆಗೆದುಕೊಡುವ ಸೀಸೆಯನ್ನು ತೆಗೆದುಕೊಳ್ಳುತ್ತಾ) That's it.

[ವೆಂಕಮ್ಮನು ಒಳಕ್ಕೆ ಹೋಗಿ ನೀರನ್ನು ತರುವಳು. ಲಕ್ಷ್ಮೀಪತಿಯು, ಒಂದು ಗಾಜಿನ ಲೋಟಾದಲ್ಲಿ ೧॥ ಗ್ರಾಮ್ ವೆರೋನಾಲನ್ನೂ, ನೀರನ್ನೂ ಮಿಶ್ರ ಮಾಡುತ್ತಿರುವನು.]

**ರಂಗಣ್ಣ** :—ಏನದ್ಕೊಡೋದು?

**ಲಕ್ಷ್ಮೀಪತಿ** :—ಬರೀ sedativeoo! soporificoo! (ಔಷಧಿಯನ್ನು ನರಸುವಿಗೆ ಕುಡಿಸಿ, ಲೋಟಾವನ್ನು ಕೆಳಗಿಡುವನು.)

**ರಂಗಣ್ಣ** :—(ನರಸುವಿನ ಹತ್ತಿರ ಬಂದು ಅವಳ ಮುಖವನ್ನು ಸವರುತ್ತಾ) ಈಗ್ಹ್ಯಾಗಿದೆ ನರ್ಸೂ ...ಸ್ವಲ್ಪ ಮೇಲೇ?

**ನರಸು** :—(ಕೈಯಿಂದ ತಂದೆಯ ಮುಖವನ್ನು ಸವರುತ್ತಾ ... ಮೃದು ಸ್ವರದಿಂದ) ಮೇಲೂಪ್ಪಾ....ಮೇಲು....ಸಸ್ವಿಷ್ಯವಾಗಿ ವಿಚಾರ್ಪಡ್ಬೇಡಪ್ಪಾ !...ಈಗ್ನಿನಿಗಿರೋ ವಿಚಾರಾನೇ ಸಾಕು. (ರಂಗಣ್ಣನ ಕೈಯನ್ನು ಮುತ್ತಿಟ್ಟು) ಸ್ವಲ್ಪ ಮೇಲು.

**ರಂಗಣ್ಣ** :—ವಿಚಾರ್ವೇನ್ಕಂದಾ (ನರಸುವನ್ನು ಮೆಲ್ಲಗೆ ಹಾಸಿ

ಗೆಯು ಮೇಲೆ ಮಲಗಿಸಿ, ಅವಳ ಹಣೆಯನ್ನು ಮುದ್ದಿಡುತ್ತಾ) ಇನ್ನಿದ್ದೇ ಮಾಡ್ತ ಸ್ಕಂದಾ! (ಲಕ್ಷ್ಮೀಪತಿಯು ಹತ್ತಿರಕ್ಕೆ ಬಂದು) . . . Serious ಏ Conditionoo?

**ಲಕ್ಷ್ಮೀಪತಿ**:—Serious ಏನು? Simple ಏನು? But I am in good time. ಇನ್ನೊಂದು ಹದ್ನೈದ್ದಿನ್ನದಲ್ಲಿ ಸರಿ ಹೋಗ್ತಾಳೆ. ನಾಳೆ ಬೆಳಿಗ್ಗೆ ಬಂದ್ನೋಡ್ತೇನೆ ..ಕಿಟ್ಟೂ, ಎತ್ಕೊಂಡ್ಬಾ ನನ್ನ ಬ್ಯಾಗ್ನ . (ಪಂಕವನ್ನು ಸಿಷ್ಕ್ರಮಿಸುವಳು.) Ranganna! ಈ cotನ ಮೇಲ್ಬಿದ್ಕೊಳ್ಳೀ comfortable ಆಗಿ....(ಕಿಟ್ಟೂಗೆ) ಕಿಟ್ಟೂ bagoo. .... ... .... .... .... .... .... .... .... .... .... .... .... .... [ಕಿಟ್ಟೂ ಚೀಲವನ್ನು ತರುವನು; ಲಕ್ಷ್ಮೀಪತಿಯು ಚೀಲದಿಂದ ಕೆಂಪು ಕಾಗದ ಹಚ್ಚಿದ ಕರಿಯ ಔಷಧದ ಸೀಸೆಯೊಂದನ್ನು ತೆಗೆದಿಡುವನು: ಗಾಜಿನ ಚಿಕ್ಕ ತಟ್ಟೆಯೊಂದರಲ್ಲಿ ಅಲ್ಪ ಔಷಧಿಯನ್ನು ಸುರಿದುಕೊಂಡು] .... .... .... .... .... ಒಂದ್ಹಂಚೀಕಡ್ಡಿ.... clean end of the broom stick· .... .... .... .... [ಕಿಟ್ಟೂ ಹಂಚೀಕಡ್ಡಿಯನ್ನು ತಂದುಕೊಟ್ಟು ನಿಷ್ಕ್ರಮಿಸುವನು....ಚೀಲದಿಂದ ತೆಗೆದ ಹತ್ತಿಯಲ್ಲಿ ಅಲ್ಪಾಂಶವನ್ನು ಕಿಟ್ಟಿಯು ತಂದ ಹಂಚೀಕಡ್ಡಿಗೆ ಸುತ್ತಿ, ಗಾಜಿನ ತಟ್ಟೆಯೊಳಗಿನ ಕರೀ ಔಷಧಿಯಲ್ಲಿ ಅದ್ದಿ ತೋಯಿಸಿಕೊಂಡು] .... .... Now then my boy, we shall try your left knee .... ನಿನಗೇನು, the root of all troubles is simply exposureoo . . . ನೀನು ಸ್ವಲ್ಪ avoid ಮಾಡ್ಬೇಕು . . . ಕಾಲಿಗೆ (ಮೊಣಕಾಲಿಗೆ ಸವರಲುಪಕ್ರಮಿಸುವನು.)

**ರಂಗಣ್ಣ**:—ಹಯ್ಯೋ! ಲಕ್ಷ್ಮೀಪತೀ....ನನ್ಕಾಲ್ನಲ್ಲಿದೇಂತ ಕಂಡ್ಹಿಡಿದ್ಬಿಟ್ಯೆಲ್ಲಾ... the root of all my troublesoo . . . ಹಯ್ಯೋ! Silly boy! the root of all my troublesoo· . . ನಮ್ಮಮ್ಮ ಸತ್ತ ಈ ಹನ್ನೊಂದ್ವರ್ಷಗಳ troublesನ rootoo, ಲಕ್ಷ್ಮೀಪತೀ, ಇಲ್ಲದೆ, (ತನ್ನ ತಲೆ ಮತ್ತು ಹೃದಯಗಳನ್ನು ಮುಟ್ಟಿ ತೋರಿಸುವನು.) ಇಲ್ಲದೆ . . . ಬಿಳ್ಳಿರೋದೇ ತಲೆ ನರ್ತು, ನನ್ಹೃದ್ಯಾ rootoo!

**ಲಕ್ಷ್ಮೀಪತೀ** :—ಏನು ? . . . ಏನದೂ ?

**ರಂಗಣ್ಣ**:—ಏನೇ ? . . . ಸತ್ತಿತ್ತೀಸೂ ಅಂಬೋ ಹೆದ್ರಿಕೆ. (ಲಕ್ಷ್ಮೀಪತಿಯು ನಗುವನು) ಹಯ್ಯೋ . . . ನಗ್ಬೇಡ . . . ಸಾಯೋಕ್ಮುಂದತೇನೇಂತ್ನಗ್ಬೇಡ . . . ಸಾಯೋಕಲ್ಲ ನಾನ್ಹೇಳ್ತಿರೋದು . . . ಲಕ್ಷ್ಮೀಪತೀ. . . ಈಗ್ನೋಡು ! . . . ನಾನೀಗೊಂದ್ವೇಳೆ ಸತ್ರೆ .... ನನ್ಮಾಳ್ನಾನ್ನನ್ಮಂತ್ರಿ ಸುಕ್ಕಿಟ್ಕೊಂಡೇನ್ಮಾಡ್ಯಾರು ? . . . . ಹ್ಯಾಗ್ಹಾಗ್ಸ್ರಾರು ಸ್ಮಶಾನಕ್ಕೆ ...ಹ್ಯಾಗ್ಬುಟ್ಬುದಿ ಮಾಡ್ಯಾರು ?

**ನರ್ಸು**:—ಹಯ್ಯೋ ! ಇದೇನಿದು ...ಅಪ್ಪನ್ಹೆಣ !.... ಅಪ್ಪನ್ಗೇ ನ್ಬಂತೂ ? ... ಅಪ್ಪನ್ಸ್ಮಶಾನಕ್ಹಾಗ್ತೋದು! ....ಅಪ್ಪನ್ಸುಡೋದು!.... ಅಪ್ಪನ್ಹೂಬ್ದಿ ! .... ಹಯ್ಯೋ ! .... ಅಪ್ಪಾ ! ಅಪ್ಪಾ !! ... .... .... (ಹೊರಳಾಡುತ್ತಾ) ಇದೇನ್ಮಾಳ್ಕನ್ಸು !!

**ರಂಗಣ್ಣ**:—ಇನ್ನಾನ್ಸತ್ಮೇಲೆ, ನನ್ಹೆಂಡ್ತಿ ಸತ್ರೆ, ಅವಳ್ಹೆಣ ದ್ಹಾಡೇನು ?

**ನರಸು** :—ಅಪ್ಪ ಮಾತಾಡಿದ್ಹಾಗಿತ್ತಲ್ಲಾ ! .... ಅಪ್ಪನ್ಹೆಂಡ್ತಿ! ನಮ್ಮಮ್ಮನ್ಹೆಣದ್ಹಾಡು ! .... ಹಯ್ಯೋ ! ತಲೆ ಬಿರಿಯುತ್ತಲ್ಲಾ .... ಹಯ್ಯೋ !....ಅಪ್ಪನ್ಹೆಣ, ಅಮ್ಮನ್ಹೆಣ....ಅಮ್ಮ !....ನಮ್ಮಮ್ಮ !

**ರಂಗಣ್ಣ** :......ಇನ್ ಕಿಟ್ಟೂ ಹೆಣ! ...ಲಕ್ಷ್ಮೀಪತೀ ! (ಮೇಜಿನ ಮೇಲಿರುವ ಕಾಗದವನ್ನು ಸೂಚಿಸುತ್ತಾ)ನನ್ನ oldest friendoo ... ನಮ್ಕಿಟ್ಟೂಗೆ ತನ್ನ daughterನ ಮಾಡ್ಕೊಳ್ಳೋದೂ ಅಂತ, ನಾವಿಬ್ರು ಹತ್ವರ್ಷಕ್ಮುಂಚೇನೇ ಮಾಡ್ಕೊಂಡ ಏರ್ಪಾಡ್ನ ಜ್ಞಾಪ್ತಿ ದ್ದಕ್ಕೆ ಬರೀತಾನೆ ನನಗುತ್ರ! "ಕಿಟ್ಟೂನ್ಬಿಟ್ಟು ನನಗ್ಬೇರೆ ಅಳಿಯ ಬೇಡ್ವೇ ಬೇಡ. ಆದ್ರೆ ನರ್ಸು ಮನೇಲಿರೋ ವರ್ಗು ಮದ್ವೇನ ಜರಗ್ಸೊ ಅನಾ ನ್ಕೂಲಾನ ಏವರ್ಸೋಕೆ ನನಗ್ಮನಸ್ಸಾರ್ದು" ಅಂತ ಅಂದ್ಬಿಟ್ಟೂ "ಹತ್ಸಾವ್ರ ರೂಪಾಯಿವರ್ಗೂ ಸಹಾಯಮಾಡೋಕೆ ತಯಾರಾಗಿ ದ್ದೇನೆ" ಅಂತಾನೆ ನರ್ಸೂನ್ಮನೆಯಿಂದ್ಹಾಗ್ಸೋಕೆ . . . . . . . .

**ನರಸು** :—ಹಯ್ಯೋ !....ಸನ್ನಾಗ್ಹೋದು!....ಸಾಯೋಕ್ತಯಾರಾಗಿಲ್ವೇ? ಹಾಳು ಜ್ವರ !....ಹಾಳಸ್ಡಾಕ್ಟ್ರು ! ...ಈ ಹಾಳ್ಡಾಕ್ಟ್ರು ಯಾಕ್ಬಂದ್ರು ?!

**ರಂಗಣ್ಣ** :—ಇಸ್ಕಿಟ್ಟೊ ಹಣಾನ....ಸರ್ನ, ಪುಟ್ಟಾ ಏನ್ಮಾಡ್ಯಾರು ? . . . ಆ ಮುಕ್ಳ ! . . . . . . . . . . . . . .

**ನರಸು** :—ಕಿಟ್ಟೊ ಹಣಾ ! ಹಯ್ಯೋ !....

**ರಂಗಣ್ಣ** :—ಇಸ್ವರ್ನ ಸತ್ರೂ....ಅವಳ್ಹಣಾನ ಈ ಪ್ರೂರಲ್ಮುಟ್ಟೊಲ್ಲ!!....ಗಳೂಯಿಂದ ಕೂಡ !! . . . . . .

**ನರಸು**:—ಸನ್ಮಣಾ ...ಈ ಪಂಭತ್ತುಷ್ಪೂರ್ಗ ಇಲ್ಲದ್ಡಾಕ್ಟ್ರು, ಈಗ್ಯಾಕ್ಬರ್ಬೇಕು ?...

**ರಂಗಣ್ಣ** :—ಇಸ್ಪಟ್ಟ ಬೇರೊಂದ್ಹ್ಕಾತಿಪೆ, ನಸ್ತಲೇಲಿ.... ಅವಳ್ವಯಸ್ಸಾಗೋ ಒಂಪೊಂದಿವ್ಸಾಸೂ,...ನಸ್ತಲೇಲಿ ಒಂದೊಂದ್ಸರೆ ಕೂದ್ಲು ಹೆಚಾಗ್ತಾ ಬರುತ್ತೆ.... ಅವಳ್ಗೀಗೊಂಭತ್ತುವಯಸ್ಸಾಯ್ತು.... ಲಕ್ಷ್ಮೀಪತೀ....ಇನ್ನಾವೆಲ್ಲ ಸತ್ಮೇಲೆ, ಆ ವಂದ್ಮಗು ಏನ್ಮಾಡೀತು?... (ಭಯಗರ್ಭಿತವಾದ ಸ್ವರದಿಂದ) ಏನೇನಸಾಹುತಗ್ಳು .... ಕಷ್ಟಗ್ಳು ನಮ್ಕುಟುಂಬಕ್ಕಂಭವ್ಸಿದ್ರೂ ಲಕ್ಷ್ಮೀಪತೀ .... ಇನ್ನದೊಂದು .... ಇದ್ವರಗೂ ಆಗಿಲ್ಲ...ಇನ್ನೀ ಮಗು ಯಾವ್ಹುಲೀ ಬಾಯಲ್ಬೀಳತ್ತೋ... ಅದೊಂದ್ಬೇರೆ ಇರೀತಿದೆ, ನಸ್ಹೃದ್ಯಾನ....ಇನ್ನೀ ಹುಲಿಗಳ್ಮಧ್ಯೆ.... ಇನ್ನ ಪಳ್ಗತಿಯೇನು ?....

**ನರಸು** :—ಹುಲೀಬಾಯ್ಲಿ !....ನಮ್ಪುಟ್ಟಾ....ಹಯ್ಯೋ !....

**ರಂಗಣ್ಣ** :—ಇದಕ್ಕೇ ಲಕ್ಷ್ಮೀಪತೀ ! ನಾನ್ನಾಯ್ಹಾರ್ದ್ದ ಅಂದದ್ದು....ಇವೆಲ್ಲಾ ಒಬ್ಬೊಬ್ರಾಗ್ಸತ್ತು, ಸ್ಮಶಾನಕ್ಕವರನ್ನಾಗ್ಸಿ, ಬೂದೀ ಮಾಡಿ....ನಸ್ಹತ್ರಿರೋಹಣ! ...ಐದ್ಸಾಸರೂಪಾಯಿ cash ಇದೆ ಲಕ್ಷ್ಮೀಪತೀ ! ನಸ್ಹತ್ರೀಗಾ !....ದೇವ್ರುಸ್ಮರ್ತು ಧನಪಿಶಾಚಿಯ ಕಾಲ್ಮೇಲೆ ಬಿದ್ಹೋರ್ರಾಡೋ ಗೋಬ್ರಾಹ್ಮಣ್ರುಗೆರಚ್ಬಿಟ್ಟು, ದೇವ್ರೇ ! ಇನ್ನಸಿಗ್ಯಾವ ಜನ್ಮ ಬಂದ್ರೂ .... ಈ ಹಾಳು ಹಣಕ್ಕಡ್ಬೀಳೋ

ಹಾರ್ವ್ರ ಜನ್ಮ ಬೇಡಾ..ಬೇಡಾ....ಅಂತ್ಹಿಡ್ಕೊಳ್ತಾ ಬಿಡಬೇಕೂಂತಿ ದೇನೆ, ಈ ದೇಹಾನ....ಇದಕ್ಕೇ ಲಕ್ಷ್ಮೀಪತೀ ನೀನು cure ಮಾಡ್ಲೇ ಬೇಕೂ....ಇದಕ್ಕೇನೇ ನನ್ಗಂತೂ ಮಕ್ಳು ಸತ್ಹೋದಿವಾಗೊನರ್ಗೂ ನಾನ್ನಾಯ್ಸ್ತಾರ್ಗ ಅಂತ್ಹೇಳ್ತಿರೋದು ನಾನು...ನಾಪಿಗೆ; ನಿನ್ಕ್ಯಾಯಿಂ ಡಾಗ್ಲೆಲ್ಲೋ, ನಮ್ಮುಕ್ಟುಂಬಕ್ಕೆಲ್ಲಾ ವಿಷಾನ್ಕೊಟ್ಟು, ನಾನೂ ಕುಡ್ದು, ಸಾಯ್ಬೇಕು ಕೊನೇಲಿ; ಯಾಕೇ ಅಂತೀಯೋ?....ನನ್ದು ಡ್ಡೆಲ್ಲಾ ಮನೆ ಹೊಸಲ್ಮೇಲ್ಬಿದ್ರ್ದ ಒಂದು willನಲ್ಲಿ "ನಮ್ಮೇ ಐದ್ಹೆಣಾನ ಯಥಾ ವಿಧಿ ಯಾರು ಸಂಸ್ಕಾರ ಮಾಡ್ತಾರೋ ಅವರ್ದೀ ದುಡ್ಡು" ಅಂತ ಬರದಿಟ್ಬಿಟ್ಟ್ರೀನೋ .... ಈ ಹೆಣಾನ್ತಾಬಿಚ್ಕೊಳ್ಳೋ ಕ್ಬರೋ ಬ್ರಾಹ್ಮಣ್ರು ಗಲಾಟೇಲಿ, ನಮ್ಮಲ್ಬಿದ್ದರೋ ಒಂದೊಂದ್ಹೆಣಕ್ಕೆ ...ಹತ್ಹತ್ಬ್ರಾಹ್ಮಣ್ರ್ಣ ಈ ಗುದ್ದಾಟ್ನಲ್ಲಿ ಬಿದ್ಹೋಗತ್ತೇ ಅಂತ್ನನಿ ಗಿಲ್ಹೇಳುತ್ತೆ...ಈಗಥ್ಹಾಗತ್ತೇ ಲಕ್ಷ್ಮೀಪತೀ?...ಒಬ್ಬಾಯಿ.....ತನ್ಕ ಣ್ಣೆದುರ್ಗ...ತನ್ಮಕ್ಳು ಅಸ್ಪಲ್ದೆ ಸಾಯೋದ್ನ ನೋಡ್ತಿರ್ಲಾರ್ದೆ.... ಅವುಗ್ಳಿಗ್ವಿಷಾ ಕೊಟ್ಟಾಯ್ತಿನ್ನಲ್ಲ ಅಂತ paperನಲ್ಲಿ ಓದಿ....ತಾಯಿಯಾ ಗ್ಮಕ್ಳನ್ನಾಯ್ಸೋ ಹೃದ್ಯಾ ಹ್ಯಾಗ್ಬಂತೂಂತ್ಕೇಳ್ತಿದ್ನಲ್ಲಾ?.. ಈಗ ಥ್ವಾಯಿತ್ತೇ....ಲಕ್ಷ್ಮೀಪತೀ?...ನಮ್ಮನ್ನೋಡಿ, ನಮ್ಹೆಣಗಳ್ನೋಡಿ ...ಹತ್ಕುಟುಂಬ ಒದಿಕ್ಕೊಳ್ಳೋದಾದ್ರೆ ಒಂದ್ಕುಟುಂಬ "ಗುಂ" ಆಗ್ಲೇ ಬೇಕು....ಹತ್ಜನದ್ಹಾನಿ ತಪ್ಸೋ ವಿಷ್ಯದಲ್ಲಿ ಒಬ್ರು ಸಾಯೋ ಕ್ಹಂಜರೀ ಬಾರ್ದು....ಹಿಂಜರಿಲೇ ಬಾರ್ದು.

**ನರಸು** :—ಯಾರೀಗ ಹಿಂಜರೀತಾ ಇರೋದು? ಈ ಶನಿ, ಡಾಕ್ಟ್ರಬ್ಬ ಬರ್ದೇ ಇದ್ರೇ ನಾನೂ ಸಾಯ್ತಿದ್ದೆ....ಎಲ್ಲಾನೂ ಸರ್ಹೋಗೋದಲ್ಲಾ....ಹಯ್ಯೋ! ....ಹಯ್ಯೋ!.....ಈಗ್ಹ್ಯಾಗ್ಮಾಯೋದು? ಈ ಶನಿ ಡಾಕ್ಟ್ರು ಬಂದ್ಬಿಟ್ನಲ್ಲಾ (ನರಳುತ್ತಾ ಹೊರಳುವಳು.)

**ವೆಂಕಮ್ಮ** :—(ಪ್ರವೇಶಿಸಿ ಮೃದುವಾಗಿ) ಡಾಕ್ಟ್ರೇ..ನೀರ್ತ್ಕಾ ಸಿಟ್ಟಿದ್ದೇನೆ, ಕಿಟ್ಟಿ ಹೇಳ್ದಾಗ . . .ಅಪ್ಪ. . .ಹ್ಯಾಗೆ. . . . . .

**ಲಕ್ಷ್ಮೀಪತಿ** :—ಏನೂ ಇಲ್ಲವಮ್ಮಾ....ಒಂದ್ಪಾತ್ರೇಲ್ತಣ್ಣೀರು ....ಒಂದ್ಪಾತ್ರೇಲ್ಬಿಸ್ನೀರು.. ಕುದೀತಿರ್ಬೇಕ್ದಚ್ಚು ಕಷ್ಟ...ಕಿಟ್ಟಿ ಒಂದು Tumbler ನೀವೊಂದು Tumbler...ಮೊಳಕಾಲ್ಮೇಲೆ (ರಂಗಣ್ಣನ ಮೊಳಕಾಲನ್ನು ತೋರಿಸುತ್ತಾ) ಬಿಸ್ನೀರ್ಮೇಲ್ತಣ್ಣೀರು, ತಣ್ಣೀರ್ಮೇಲ್ಬಿಸ್ನೀರು, ಕಾಲ್ಘಂಟೆ ಹೊತ್ತಾದ್ರು ಹಾಕೋದು...ತಿನ್ನೋ ಔಷಧಾ ....ಕಿಟ್ಟೀ ಕೈಲ್ಕೊಡ್ತೀನಿ ಅಷ್ಟೆ....ಇನ್ನೇಳ್ರಂಗಣ್ಣಾ...ನೀರಾರೀತು.

(ವೆಂಕಮ್ಮನೂ, ರಂಗಣ್ಣನೂ ನಿಷ್ಕ್ರಮಿಸುವರು.)

**ಲಕ್ಷ್ಮೀಪತಿ** :—(ಮೇಜಿನ ಮೇಲೆ ಒಂದು ಸೀಸೆಯನ್ನೂ ಅರಳೆಯನ್ನೂ ಇಟ್ಟು, ಬಾಗಿಲಿಗೆ ಒರಗಿಕೊಂಡು ನಿಂತಿರುವ ಕಿಟ್ಟೂಗೆ) ಇದಿಲ್ಲಿಟ್ಟೋಗ್ತೀನಿ, ನಾಳೆ apply ಮಾಡೋಕೆ....Cottonooನೇ ಪಕ್ದಲ್ಲೇ ಇದೆ... ಹಂಚೀಕಡ್ಡೀಲಿ brush ಮಾಡ್ಕೊಂಡು ನೀನೇ ಹಚ್ಚು..ನೀನಾಯಿ ಮುಟ್ಗ ಹುಷಾರೂಪ್ಪ!..Terrible poisonoo! linament of Belladonna, ಒಂದ್ಬಾಯಿ ನುಂಗ್ಬಿಟ್ರೆ ಯಾವ್ದಾಕ್ಟ್ರು ಬಂದ್ರೂ ಬದಕ್ಕೊಳ್ಳೋದಸಾಧ್ಯ....ಮಗು ಇರೋ ಮನೆ...ಹುಷಾರೂಪ್ಪ...Good-Night.

**ಕಿಟ್ಟೂ** :—Good-Night ಡಾಕ್ಟ್ರು .... ಬೆಳಿಗ್ಗೆ ಬಂದ್ಹೇಳ್ತೀನೆ....ನನ್ನ ಸ್ಥಿತೀನ.

(ಲಕ್ಷ್ಮೀಪತಿಯು ಬೀದೀಬಾಗಿಲಿನಿಂದಲೂ ಕಿಟ್ಟಿಯು ಹಿಂದಿನ ಬಾಗಿಲಿಂದಲೂ ನಿಷ್ಕ್ರಮಿಸುವರು.)

**ನರಸು** :—(ಕಣ್ಣುಗಳಲ್ಲಿಯೂ, ಮುಖದಲ್ಲಿಯೂ ಉನ್ಮಾದವು ತುಂಬಿ ತುಳುಕುತ್ತ) ಯಾವ್ಡಾಕ್ಟ್ರು ಕೈಲೂ ಆಗೊಲ್ಲ...ಇದೊಂದ್ಬಾರಿ ....ಈಗ್ದಿದಬಾರ್ದುರ್...ಅಪ್ಪೋಳ್ದ ... ಹತ್ಜನದ್ದಾನಿ ತಪ್ಪೋಕೆ ಒಬ್ರು ಸಾಯೋಕ್ಹಿಂಜರೀ ಬಾರ್ದೂಂತ ...ಇನ್ನಾನ್ನತ್ನೋ ...ಎಲ್ಲಾ ಸಹೋರ್ಗ್ತ್ಮನೇಲಿ....ಅಪ್ಪೂ ಅಮ್ಮೂನೇ ಸಾಯ್ಬೇಕಾದ್ದಿಲ್ಲ .... ಕಿಟ್ಟೀಗೂ ಹೆಂಡ್ತಿ ಬರ್ತಾಳೆ....ಪುಟ್ಟಾಂನ್ನುಂಗೋಕೆ ಯಾವ್ದುಲೀನೂ ಬರೋದಿಲ್ಲ....ಹಿಂಜರೀಬಾರ್ದು... [ಹಲ್ಲನ್ನು ಕಚ್ಚಿಕೊಂಡು ಉನ್ಮಾದಾವಸ್ಥೆಯಲ್ಲಿ

ಮಂಚವನ್ನು ಇಳಿದು ಕೋಣೆಯ ವಾಮಾಂಶವನ್ನು ಸೇರಿ ದ್ರಾವಕದ ಸೀಸೆಯನ್ನು ಮೇಜಿನಿಂದ ಕಸಿದು, ಸೀಸೆಯ ಬಿರಡೆಯನ್ನು ಕಿತ್ತೆಸೆದು ಸೀಸೆಯ ಬಾಯನ್ನು ತನ್ನ ಬಾಯಿಗೆ ಎತ್ತುವ ಪ್ರಯತ್ನದಲ್ಲಿ ಹಿಂಜರಿಯುವ ಕೈಯನ್ನು ಮತ್ತೊಂದು ಕೈಯಿಂದ ಜಗ್ಗಿ, ಬಾಯಿಗೆಳೆಯುತ್ತಾ] ಈಗ್ಹಿದರ್ಬಾರ್ದು .... ಹಿಂಜರೀಬಾರ್ದು ....

ಅಪ್ಪನ್ನಾವು ...ಅಮ್ಮನ್ನಾವು ...ಕಿಟ್ಟೀಸಾವು....ಪುಟ್ಟಾ ಹುಲಿ ಬಾಯ್ಗ್ ಬೀಳೋದ ...ಇದ್ನೆಲ್ಲಾ ತಪ್ಸೋಕೆ....ಒಂದೇ ದಾರಿ ...ಇದ್ನ ಗಾನ ಹೆದರ್ದೆ ಸುರ್ಕೊಂಡ್ಮೋ ಬಾಯ್ಗೆ ...ಡಾಕ್ಟ್ರು ಹೇಳಿದ್ದಾರೆ.... ಯಾರ್ಬದುಕ್ಸೋಕೂ ಅಸಾಧ್ಯಾಂತ....ಬೆದರ್ಬಾರ್ದೀಗ, ಹಿಂಜರೀಬಾರ್ದೀಗ ... [ಥಟ್ಟನೆ ದ್ರಾವಕವನ್ನು ಬಾಯಿಗೆ ಬಸಿದುಕೊಂಡು ವಾಂತಿಯಾಗಲು ಉದ್ಯೋಗಿಸುವ ಅವಸ್ಥೆಯನ್ನು ಹಲ್ಲು ಕಚ್ಚಿಕೊಂಡು ಅಡಗಿಸಿ—ಒಂದು ತೊಟ್ಟಾದರೂ ಹೊರಬೀಳುವುದಕ್ಕೆ ಆಸ್ಪದ ಒದಗದಂತೆ ಎರಡು ಕೈಗಳಿಂದಲೂ ಬಾಯನ್ನು ಬಿಗಿದು ಮುಚ್ಚಿ, ನುಂಗಿದ ದ್ರಾವಕವು ಜಠರದಲ್ಲಿ ಸಿಕ್ಕಿದ ವ್ಯಥೆಯನ್ನು ತಡೆಯಲಾರದೆ ನೆಲಕ್ಕೆ ಕುಸಿದು ಬಿದ್ದು ಹೊಟ್ಟೆಯನ್ನು ಕೈಗಳಿಂದ ಕಿವಿಚಿಕೊಳ್ಳುತ್ತಾ "ಹಯ್ಯೋ ಹಯ್ಯೋ" ಎಂದು ಹೊರಳಾಡುವಳು.]

ಪುಟ್ಟ :—(ಪ್ರವೇಶಿಸಿ) ಏನಕ್ಕಾ ಇದೂ(ಬೆದರಿ ಬೆಚ್ಚಿಬಿದ್ದು) .... .... .... .... ಅಮ್ಮನ್ಕರೀತೇನೆ!

ನರಸು :—ಬೇಡಾ, ಇಲ್ಲಾ—ನೀರೂ —ನೀರೂ ! ಕಿಟ್ಟೊನ್ಮಟ್ಟಿಗ್ಕರೀ...ಅಮ್ಮಸಿಗ್ಹೇಳ್ಬೇಡ......ಅಪ್ಪನಿಗ್ಹೇಳ್ಬೇಡ . . . ನೀರೂ.. (ನೆಲದ ಮೇಲೆ ಬಿದ್ದು ಹೊರಳಾಡುತ್ತ) ನೀರೂ...ಕಿಟ್ಟೊನ್ಮಟ್ಟಿಗ್ಕರೀ. . . ಹಯ್ಯೋ ನೀರೂ....

ಪುಟ್ಟ :—(ಬಾಗಿಲಿಗೆ ಓಡಿ) ಕಿಟ್ಟೊ.... .... ಕಿಟ್ಟೊ.... .... ಇಲ್ಲಾ .... .... ಅಕ್ನಿಗೆ .... .... .... .... ....

ನರಸು :—ಮೆಲ್ಲಗ್ಕೂಗು ಪುಟ್ಟಾ....ನೀರೂ.... ನೀರೂ....

**ಪುಟ್ಟಿ** :—ತರ್ತೀನಕ್ಕಾ....(ಹೋಗಿ ಒಂದು ಲೋಟ ನೀರನ್ನು ತರುವಳು.)

**ನರಸು** :—(ನೀರನ್ನು ಒಂದೇ ಗುಟುಕಿಗೆ ಕುಡಿದು) ಸಾಲ್ದೂ... ಸಾಲ್ದೂ....ಚೊಂಬ್ನಲ್ತಗೊಂಬಾ... ಬಿಂದ್ಗೇಲ್ತಗೊಂಬಾ .... ಹಂಡೇಲ್ತಂದ್ರೂ ಸಾಲ್ದೂ .. ಹಯ್ಯೋ ಹಯ್ಯೋ !....

**ಕಿಟ್ಟು**:— (ಗಾಬರಿಯಿಂದ ಪ್ರವೇಶಿಸಿ) ಏನ್ನರ್ಸು ಇದೂ ! (ಸುತ್ತಮುತ್ತಲೂ ವಾಸನೆಯನ್ನು ನೋಡಿ, ಖಾಲೀ ಸೀಸೆಯನ್ನು ನೋಡಿ) ಹಯ್ಯೋ ! ದೇವ್ರೇ! ಇದ್ನ ಕುಡಿದ್ಬಿಟ್ಯಾ !!....(ಬೀದಿಯ ಬಾಗಿಲು ಕಡೆ ಹೆಜ್ಜೆ ಇಡುತ್ತಾ) ಡಾಕ್ಟ್ರರ್ನ ಕರೀತೇನೆ.

**ನರಸು** :—(ಹೊರಳಿ ಹೊರಳಿ ಕಿಟ್ಟಿಯನ್ನು ಸಮೀಪಿಸಿ ಅವನ ಕಾಲನ್ನು ಹಿಡಿದಪ್ಪಿಕೊಂಡು ಅವನ ಪಾದದ ಮೇಲೆ ಮುಖವನ್ನು ಹೊರಳಿಸುತ್ತಾ) ದಮ್ಮಯ್ಯಾ .. ಕಿಟ್ಟೀ..ಹೋಗ್ಬೇಡ..ಯಾವ್ಡಾಕ್ಟ್ರು ಒಂದ್ರೂ ಅಸಾಧ್ಯ ...ಒದ್ಕೋದಸಾಧ್ಯ . ದಮ್ಮಯ್ಯಾ ... ಅಪ್ಪಿಗೂ, ಅಮ್ನಿಗೂ ಹೇಳ್ಬೇಡಾ....ನೀರೂ.... (ಹಿಂದಕ್ಕೆ ಬಿದ್ದು ಹೊರಳುತ್ತಾ) ಪಾಪೀ ನೀರೋ....ನಿಸ್ಧರ್ಮಕ್ನೀರೋ.... (ಕಿಟ್ಟಿಯು ಒಳಕ್ಕೆ ಹೋಗಿ ಚೊಂಬಿನ ತುಂಬ ನೀರನ್ನು ತರುವನು) ; (ನರಸುವು ಅದನ್ನು ಕಿತ್ತು ಕೊಂಡು ಕುಡಿದು) ಅಮ್ಮಾ....ಅಮ್ಮಾ (ಸ್ವಲ್ಪ ಸಿದಾನವಾಗಿ)ಹಯ್ಯೋ ಕಿಟ್ಟೀ .. ನಾನ್ಹುಟ್ಟಿದಾರಭ್ಯ ಒಪ್ಗೊಂಡುಪ್ಕಾರ ಮಾಡ್ಲಿಲ್ಲಾ.... ಅಜ್ಜಿ ಸಾಯೋವಾಗ....ಅಪ್ನೂ, ಅಪ್ನೂವೇ ಬಯ್ದ್ದಾಗೆ....ನಾನ್ಹುಟ್ಟಿದ್ದೇ ನಮ್ಕುಟುಂಬಕ್ಕೇ ಅಪ್ಕಾರ ! ಈಗ್ನನ್ನಾಸ್ನಿಂದ ಅಮ್ನಿಗೂ, ಅಪ್ಪಿಗೂ, ಪುಟ್ಟಾಗೂ ಆಗೋ ನಪ್ಪುಪ್ಕಾರಾನ .... ....ನಿಸ್ಧರ್ಮಕ್ಕೆ ಕೆಡಸ್ಬೇಡ ಕಿಟ್ಟು.... ಆ ಸೀಸೇನ ಮೂಲೇಗ್ಬಿಸಾಕು ! ನಾನ್ಹೀಗ್ನ ತ್ರೇಂಬೋದು ಹೊರಗ್ಬಿದ್ರೆ .... ನಾಳೇ ಸನ್ಹೀಣಾನ್ಸಾಗ್ಸೋದು .... ಅಸಾಧ್ಯವಾಗುತ್ತೆ, ಅಪ್ಪಿಗೆ....ನೀರೂ.... ನೀರೂ.... ನೀರೂ .... ....

**ಕಿಟ್ಟು**:—(ಒಳಕ್ಕೆ ಹೋಗಿ ಚೊಂಬಿನ ತುಂಬ ನೀರನ್ನು ತರುವನು.)

**ನರಸು** :—(ಕಿತ್ತುಕೊಂಡು ಕುಡಿದು ಬಿಟ್ಟು) ಸಿಲ್ಕಾರೇ.... ಸಿಲ್ಕಾರೇ....

**ಕಿಟ್ಟೂ** :—(ಮೆಲ್ಲಗೆ ನರಸುವನ್ನು ಎತ್ತಿ ಮಂಚದ ಮೇಲೆ ಮಲಗಿಸುವನು.)

**ನರಸು** :—ಪುಟ್ಟಾಪ್ನಿಡ್ಜೇಡ....ಅಪ್ನಿಗ್ಹೇಳ್ಬಿಟ್ಟಾಳು.

**ಕಿಟ್ಟೂ** :—ಇದ್ಕಾಪ್ಪಲ್ಪೆ ನರ್ಸು .... ಹೇಗ್ಮಾಡ್ಬಹುದೇ ?.... ದೇವ್ರು ಒಪ್ಪ್ಯಾನೇ ?

**ನರಸು** :—ಯಾವ್ದೇವ್ರು ? ಕಿಟ್ಟೂ? .... ಗಂಡಸ್ರಿಗಿಧಾನೆ ದೇವ್ರು ; ಹೆಂಗಸ್ರಿಗೆ ...ಗಂಡ್ನೇ ದೇವ್ರು ಅಂತಾರಲ್ಲಾ ದೊಡ್ಡವ್ರು.... ಗಂಡ್ನೇ ಇಲ್ಲದ್ದನಗೆ ದೇವ್ರೆಲ್ಲಿ? ...ನನ್ಪಾಪಾನ ಒಪ್ಪೋಕಾಗ್ಲಿ ...ತಪ್ಪೂ ಅನ್ನೋಕಾಗ್ಲಿ, ಗಂಡ್ವಿಲ್ಲದ್ನನಗೆ ದೇವ್ರೆಲ್ಲಿಧಾನೆ ?.... ಇನ್ನೀ ನನ್ಪಾಪ್ದಿಂದ, ನಿನಗ್ಕುಂಪಕ್ಬರೋ ಹೆಂತ್ತೀಗೆ, ದೇವ್ರುನ್ನೂ....ನಾನ್ನತ್ಮೇಲೆ ಪುಟ್ಟಾಗಾಗೋ ಮುದ್ವೆಯಿಂದ ಅಪ್ಪಿಗೂಬ್ಬ ದೇವ್ರುನ್ನೂ ...ನಾನ್ಮಾಡ್ಕೊಟ್ಟಾಗೆ ಆಗುತ್ತೆ ...ಕಿಟ್ಟು .... ಇದ್ಕಾಪ್ಪಲ್ಲ ...ಪುಣ್ಯ . ನಾನ್ಹೊಡ್ಹೋಳಾದ್ದು ದೊಡ್ಡ ಪಾಪ ...ಇವ್ವರೂ ಬದ್ಕಿದ್ದದ್ದೇ ಪಾಪ ... ಇನ್ನಾನ್ಸಾಯೋದ್ಪುಣ್ಯ ...ಕಿಟ್ಟೀ....ಪುಣ್ಯ! ... ಕಿಟ್ಟೀ .... ಹೋಗ್ತಿದೇನೆ ...ಅಮ್ಮನ್ನೊಂದ್ಸರ್ತಿ ನೋಡ್ಬೇಕೂಂನ್ನತ್ತೆ .... ಅಪ್ಪಿಗ್ತಿಳೀದ್ಹಾಗೆ, ಮೆಲ್ಲಗ್ಕರ್ಕೊಂಬರ್ತೀಯಾ ... ? .... .... .... ....

**ಕಿಟ್ಟೂ** :—(ತನ್ನ ಅಳುವನ್ನು ತಡೆಯುತ್ತಾ) ಹೂಂ....ನರ್ಸು (ನರುಸುವಿನ ಕೈಗಳನ್ನು ತೆಗೆದುಕೊಂಡು ಕಣ್ಣಿಗೆ ಒತ್ತಿಕೊಂಡು ಅಳುವನು.)

**ನರಸು** :—ಅತ್ತೇನ್ಪ್ರಯೋಜ್ನ ? ಕಿಟ್ಟೀ ...ಅಜ್ಜಿ ಸತ್ತಾಗ್ನಿಂದ ....ಅಳುನಲ್ಲೇ ಮುಳ್ಗಿರೋ ನಮ್ಮನೇಲಿ ...ಇವತ್ನಿಂದ ಆದ್ರೂ... ಅಳು ಅಡಗ್ಲಿ ...ಕಿಟ್ಟೂ....(ಕಿಟ್ಟೂವಿನ ಮುಖವನ್ನು ತನ್ನ ಮುಖದ ಹತ್ತಿರಕ್ಕೆಳೆದುಕೊಂಡು, ಅವನ ಹಣೆಗೆ ಮುದ್ದಿಡುವಳು) ಕಿಟ್ಟೀ .... ನಮ್ಕಿಟ್ಟಿ....ಅಮ್ಮನ್ಕರೀ....ರಾಜ....ನೋಡ್ಬಿಟ್ಹೋಗ್ತೀನಿ.

[ಕಿಟ್ಟಿಯು ಅಳುತ್ತ ನಿಷ್ಕ್ರಮಿಸುವನು.]

**ಪುಟ್ಟ** :—ಅಕ್ಕಾ ....ನೋವ್ನಿಂತಿದೆಯೇ ?....ಎಲ್ಲಾ ಸರ್ಹೋಗುತ್ತೇ ?

**ನರಸು** :—(ಪುಟ್ಟಾವಿನ ಮುಖವನ್ನು ಸವರುತ್ತಾ) ಇನ್ನೇಲೆಲ್ಲಾ ಸರ್ಹೋಗತ್ತನ್ನಾಣಿ... ಆದ್ರೆ ನೋವು ಹಾಗೇ ಇದೆ ...ಇನ್ನೂ ಹೆಚ್ಚಿದೆ. ನೀರೂ ...ನೀರೂ....

**ಪುಟ್ಟ** :—ನೋವು ನಿಂತಿಲ್ವೇ? .... ಹೆಚ್ಚಿದೆಯೇ ? .... ಮತ್ತೆ ಹ್ಯಾಗ್ಸರ್ಹೋಗತ್ತೇ ?

**ನರಸು** :—ಹ್ಯಾಗ್ಹೋಗ್ತಿತ್ತಿಲ್ವೆ ಪುಟ್ಟಾ! .... ಎಲ್ಲಾ ಸರ್ಹೋಗೋಕ್ಮುಂಚೇನೇ ನೋವ್ಹೋಚ್ಚು .... ಬೆಳ್ಳಂಬೆಳಗ್ಗಾಗೋಕ್ಮುಂಚೇನೇ ಕಕ್ಕಕ್ಕತ್ಲೆ ಹೆಚ್ತು .. ಹಕ್ಕಿಗ್ಳಿಗೆ ...ರೆಕ್ಕೆ ಬಂದು ಹಾರೋಕ್ಮುಂಚೇನೇ ಗೂಡಿನಿಕ್ಕಟ್ಟಿದ್ರೆಚ್ಚು (ಪುಟ್ಟವನ್ನು ತಬ್ಬಿಕೊಂಡು) ನನ್ಕಂದ ...ಈಗ್ಯಾವ್ಹುಲಿ ಬರುತ್ತೋಡೋಣ, ನನ್ಕಂದನ್ನುಂಗೋಕೆ....ಅಮ್ಮ ಬಂದ್ಲೇ ಪುಟ್ಟಾ.... ....?

[ಕಿಟ್ಟೂ ಮತ್ತು ವೆಂಕಮ್ಮ ಪ್ರವೇಶಿಸುವರು.]

**ಕಿಟ್ಟೂ**:—(ಬಾಗಿಲ ಬಳಿಯಲ್ಲಿ)ಅಮ್ಮಾ ಎಲ್ಲಾ ಆಗ್ಹೋಯ್ತು ....ಹೋಗ್ಬಿಡಾಳೆ .. ಅಳದೆ .... ಮಾತಾಡ್ದೆ .. ಸುಮ್ನೆ (ಅಷ್ಟರಲ್ಲೇ ಬರುವ ದುಃಖವನ್ನು ತಡೆದುಕೊಂಡು, ಮಾತಾಡದೆ ಮಂಚದ ಕಡೆಗೆ ತೋರಿಸುವನು.)

**ವೆಂಕಮ್ಮ**:—(ನರಸುವನ್ನು ವೇಗವಾಗಿ ಸೇರಿ) ಹಯ್ಯೋ ನರ್ಸೂ, ಹೀಗ್ಮಾಡಬಹುದೇ !!

**ನರಸು** :— (ತಾಯಿಯನ್ನು ಪಕ್ಕದಲ್ಲಿರಿಸಿಕೊಂಡು ಅವಳ ಮುಖಕ್ಕೆ ತನ್ನ ಮುಖವನ್ನೊತ್ತುತ್ತ) ಅಮ್ಮಾ ! . . . ನಮ್ಮಮ್ಮ ! . . . . . . ಅಮ್ಮಾ, ನೀನಕ್ಕೆಷ್ಟಿನ ಆಯ್ತುಮ್ಮ . . . ನನ್ಗೆ ಮದ್ವೆ ಮಾಡ್ಬೇಕು ಅಂತ ನಿಶ್ಚಯ್ಸಿದ್ದಿನ್ದಿಂದ ಈಗಿನ್ವರಿಗೂ ಒಂದ್ನಗೂ ನಲೀಲಿಲ್ಲವಮ್ಮಾ. . . ನಿಮ್ಮಖದ್ಮೇಲೆ . . . ಆದ್ರಿನ್ಮೇಲ್ನಗ್ತೀಯಮ್ಮಾ.

**ವೆಂಕಮ್ಮ** :—ಹಯ್ಯೋ! ಸರ್ಸೂ . . . ಸೀನ್ನೋದ್ಮೇಲೆ ನಗೂ ಬೇರೇನೆ ನನ್ಗೆ?

**ನರಸು** :—ಇಲ್ವೇ ಏನಮ್ಮಾ! . . . ಇಸ್ಸ್ವರ್ಷ್ದಸ ದುಃಖ! ಅಷ್ಟೆ. ಕಿಟ್ಟ್ಯಾಗ್ಹುದ್ಸ್ವ ಆಗ, ಮಕ್ಕ್ಳುಟ್ಟಿ ಮನೆತುಂಬ, ಆ ಮಕ್ಳು ಅಂಬೆಗಾಲಿಡ್ತಿರೋವಾಗ ನಗುಬರುತ್ತಮ್ಮಾ, ತನ್ನಷ್ಟಗ್ತಾನೆ ಬರುತ್ತಮ್ಮಾ (ವೆಂಕಮ್ಮನ ತಲೆಯನ್ನು ಸವರುತ್ತಾ) ಅಮ್ಮಾನಾನ್ಹುಡ್ಗೀಳಾಗೋಕ್ಮುಂಚೆ, ಸಿಸ್ತಾಲೇಲೊಂದ್ಸಾರ್ತಿ ಕೂದ್ಲಿರ್ಲಿಲ್ಲಮ್ಮಾ . . . . . . ಹೇಳ್ತಾರಲ್ಲಾ, ಕೊತ್ತ್ಬಂದ್ನ್ಕಸದ್ರಿ, ಕೂದ್ಲು ನರೆತ್ಹೋಗ್ತೀಂತ . . . . ತಿರ್ಗ್ಸಂತೋಷ ಬಾದ್ರೀನಮ್ಮಾ, ನರ್ತ ಕೂದಲು ತಿರ್ಗ್ಸೂಸೆ ಕಪ್ಪಾಗ್ಬೇಕಲ್ವೇ? . . . . . ಕಿಟ್ಟ್ಯಾಗ್ಹುಂಡ್ತಿ ಬಂದು, ಪುಟ್ಟ್ಯಾಗ್ಗಂಡನ್ನ್ಕ ಬಂದು, ಮನೆಯೆಲ್ಲಾ ಮಕ್ಕ್ಳನಗು . . . . ಬ್ರಾಹ್ಮಣ್ರ ವೇದ ಘೋಷ, ಮನೇತುಂಬ ತುಂಬಿರೋವಾಗ, ನಿನ್ನ್ಕೂದ್ಲು ಕಪ್ಪಾಗಿ ನಗ್ತೀಯಮ್ಮಾ. ತಿರಗ್ನಗ್ತೀಯಮ್ಮಾ . . . . . . ಇದ್ನಾನ್ಮಾಡಿದ್ದಾಪಾಂಡಾಮ್ಮಾ ಕಿಟ್ಟ . . . . ಹೆಂಗ್ಸಿಗೆ ಗಂಡ್ನೇ ದೇವ್ರೂಅಂತ ಅಂತಾರಲ್ಲಾ . . . . ಕಿಟ್ಟ್ಯಾ ಹೆಂಡ್ತೀಗೂ, ಪುಟ್ಟ್ಯಾಗೂ ದೇವ್ರನ್ನ್ಕ, ಸಿಸ್ಮಖಿಕ್ಕಗೂಸೂ, ಅಪ್ಪಿಗ್ಸಂತೋಷಾಸೂ, ತರೋ ಇದ್ನ ನಾನ್ಮಾಡಿದ್ದಾಪ್ಪೇಅಮ್ಮಾ . . . . ಇನ್ನ್ಕ ಆಗ್ನಾದ್ರೂನೂ, ಯಾಕ್ಹುಟ್ಟಿದ್ದೀಶಿಸೀ ಅಂತಜ್ಜೆ . . . . [ತಟ್ಟನೆ ಎದ್ದು ಕುಳಿತು ಎರಡು ಕೈಗಳನ್ನು ಮೇಲಕ್ಕೆತ್ತಿ, ಸೂರಿನಲ್ಲಿ ಯಾರನ್ನೋ ಕಂಡಂತೆ ದುರುದುರುಗುಟ್ಟಿ ದೃಷ್ಟಿಯನ್ನು ನಿಶ್ಚಲವಾಗಿ ನಿಲ್ಲಿಸಿ ಚೀತ್ಕಾರಧ್ವನಿಯಿಂದ] ಅಜ್ಜೇ. . . . ಬಯ್ಬೇಡ ಅಜ್ಜೇ, ಶಪಿಂತ್ಬಯ್ಬೇಡ .... ಇನ್ಮೇಲೆಲ್ಲಾ ಸರ್ಹೋಗುತ್ತೆ .... .... ಅಜ್ಜೇ ... ....ಬಯ್ಬೇಡ ... ಅಜ್ಜೇ. . . ಬಯ್ಬೇಡ. . . .ಹಾ? . . . . ಹಾಂ! ... .... [ಥಟ್ಟನೆ ಬೀಳುವಳು. ಗತಪ್ರಾಣಳಾದ ನರುಸುವಿನ ತಲೆಯು ಮಂಚದ ಅಂಚನ್ನು ಅತಿಕ್ರಮಿಸಿ ಬಿದ್ದು ತೂಗುವುದು. ಕೇಶರಾಶಿಯು ನೆಲಕ್ಕೆ ಬಿದ್ದು ಶವದ ಮುಖದಲ್ಲಿ ಮುಗುಳಿನ ಮುದ್ರೆಯು ಕಂಡುಬರುವುದು.]

**ವೆಂಕಮ್ಮ** :— ಹಯ್ಯೋ! ಸರ್ಸು! ಹೋದ್ಯಾ! [ಶವದ ಭುಜಪಾರ್ಶ್ವದಲ್ಲಿ ಮುಖವನ್ನು ಹೂತು ಬಿಕ್ಕಿ ಬಿಕ್ಕಿ ಅಳುವಳು. ಕಿಟ್ಟಿಯು ತಲೆಯ

ಭಾಗದಲ್ಲಿಯೂ, ಪುಟ್ಟ ಕಾಲಿನ ಕಡೆಯೂ ಮುಖಗಳನ್ನು ಹೊರಳಿಸುತ್ತಾ........ "ನರಸೂ, ನರಸೂ, ಅಕ್ಕಾ, ನಮ್ಮಕ್ಕಾ" ಎಂದು ಬಿಕ್ಕಿ ಬಿಕ್ಕಿ ಗೋಳಾಡುತ್ತಿರುವರು.]

**ರಂಗಣ್ಣ:**—(ನಸೆದ ವಸನದೊಂದಿಗೆ ಪ್ರವೇಶಿಸಿ ಈ ದೃಶ್ಯವನ್ನು ನೋಡಿ) ಹಯ್ಯೋ ದೇವ್ರೇ.... ಇದೇನಾಗ್ಹೋತಾ.... .... [ಮೇಜಿನ ಮೇಲಿನ ಖಾಲೀ ಸೀಸೆಯನ್ನು ಗಮನಿಸಿ, ಹಣೆಯನ್ನು ಬಡಿದುಕೊಳ್ಳುತ್ತ ಶವವನ್ನು ಸಮೀಪಿಸಿ ಅದರ ಮೇಲೆ ಮುಖವನ್ನು ಹೊರಳಿಸುತ್ತಾ .... .... ಹೃದಯವನ್ನು ಭೇದಿಸುವ ಆರ್ತಧ್ವನಿಯಿಂದ] ಹಯ್ಯೋ! ನಸ್ಕಂದಾ! ನಸ್ಬುಡ್ತಾನದ ಪಾಪಕ್ಕೆ ಈ ಹಾಳ್ನವಾಜದ ಬಾಯ್ಗೆ ಬಲಿಯಾಗ್ಹೋಕ್ಟಿನ್ನ ಬ್ರಾಹ್ಮಣ್ಕೇನ, ಸಿನ್ಪಾಪಿ ತಂದೇಗೆ ಉಳಿಸ್ಕೋಡೋಕ್ನೇನ್ಬಲೀ ಆದ್ಯಾ! .... ಹಯ್ಯೋ! ಈ ತಪ್ಸ್ಕಾರದೂ!!! [ಬಿಕ್ಕಿ ಬಿಕ್ಕಿ ಮಿಕ್ಕ ಮೂವರಂತೆ ಶವದ ಮೇಲೆ ಮುಖವನ್ನು ಹೊರಳಿಸುತ್ತಾ ಗೋಳಾಡುವನು.]

[ಪರದೆಯು ನಿಧಾನವಾಗಿ ಬೀಳುವುದು]

ಭೂತದಯವೆಂಬುದನು ನಾಣ್ಯಕೆ।
ಸೋತ ಪಾರ್ವನು ತಿಳಿಯನೇನ್ಬೈ।
ನೀತಿ ಮಾರ್ಗದ ಮಾತು ರುಚಿಸುವುದೆಂತು ಘಾತುಕಗೇ ?॥



ಮುದ್ರಿಸಿದ್ದು :
ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ನಗರ

# ಕೈಲಾಸಂ

ಇವರ ಈ ಸಾಮಾಜಿಕ ನಾಟಕಗಳು ಅಚ್ಚಿನಲ್ಲಿವೆ

ಹೋಂ ರೂಲೂ

ಅಮ್ಮಾವ್ರಗಂಡ

ಗಂಡಸ್ಕತ್ರಿ

ಸತ್ತವನ ಸಂತಾಪ

ಬ್ರಾಹ್ಮಣಿಕೆ

ಬಂಡ್ವಾಳ್ವಿಲ್ಲದ ಬಡಾಯಿ

ಶೂರ್ಪಣಖಾ

ಸೂಳೆ

ತಾಳೀಕಟ್ಟೋಕ್ಕೂಲೀನೇ ?

ಅಳಿಯನ ಮುಪ್ಪಿಗೆ ಅಪರಂಜಿ ಸಿಪ್ಪೇ ?

ಮೊಮ್ಮಗಳ ಮುಯ್ಯಿ

ಪೋಲೀ ಕಿಟ್ಟೀ

(೨ ಭಾಗಗಳು)

ಇತ್ಯಾದಿ

ರಾಮಮೋಹನ ಕಂಪೆನಿ

ಬಳೇಪೇಟೆ : : : ಬೆಂಗಳೂರು ನಗರ